

# ಚಂದಮಾಮ

ಸಂಸ್ಥಾಪಕರು: **ನಾಗಿರೆಡ್ಡಿ**
ಸಂಚಾಲಕರು: **'ಚಕ್ರಪಾಣಿ'**

---

**ಕ್ರೂ**ರತನಕ್ಕೆ ರಾಕ್ಷಸರನ್ನೂ ಭಯಂಕರಕ್ಕೆ ಪಿಶಾಚಿಗಳನ್ನೂ ಉದಹರಿಸುವುದು ಸರ್ವಸಾಧಾರಣ. ಸೌಮ್ಯರೂಪದಲ್ಲಿ ಇವೆರಡೂ ಸೇರಿರುವ ಜಾತಿಯೊಂದು ನರ ಜಾತಿಯಲ್ಲೇ ಮೆರೆಯುವುದನ್ನು ಪ್ರತಿಯೊಬ್ಬರೂ ಅನುಭವದಿಂದ ಅರಿಯಬಹುದು. ಮೃಗಗಳ ಕ್ರೌರ್ಯ ಭಯಂಕರತೆಗಳಲ್ಲಿ ಮೋಸ ಮಾಯೆಗಳಿಲ್ಲ. ಯಾವ ಮೃಗ ಹೇಗೆಂಬುದು ಎಲ್ಲರಿಗೂ ಗೊತ್ತು. ಆದರೆ ಅಧಿಕಾರದ ನೆರಳಿನಲ್ಲಿರುವ ನರರು ದುಷ್ಟರಾದರೆ ಪ್ರಜೆಗಳಿಗೆ ಘೋರ ಅಪಾಯವಿದೆ. ಇದರ ಸೂಚನೆಗಳನ್ನು ಈ ಸಂಚಿಕೆಯ "ನರಪಿಶಾಚಿಗಳು" ಎಂಬ ಬೇತಾಳ ಕಥೆಯಲ್ಲಿ ನೋಡಿರಿ.

---

ಸಂಪುಟ: ೫೫] ಮಾರ್ಚಿ '೭೫ [ಸಂಚಿಕೆ: ೩




CHITRA



# ಮಿತ್ರಭೇದ

## ೨೦

ಗುಬ್ಬಚ್ಚಿ, ಮರಕುಟಿಗ ಹಕ್ಕಿ, ತುಂಬಿ ಇವು ಮೂರೂ ಕೂಡಿಕೊಂಡು ಕಪ್ಪೆಯ ಬಳಿಗೆ ಹೋದುವು. ಅವುಗಳು ಹೇಳಿದುದನ್ನೆಲ್ಲಾ ಕೇಳಿ ಕಪ್ಪೆ ಹೇಳಿತು: "ನಾವೆಲ್ಲ ಚಿಕ್ಕ ಚಿಕ್ಕ ಪ್ರಾಣಿಗಳಾದರೂ ಬುದ್ಧಿಯಿಂದ ದೊಡ್ಡವರಂತೆ ಮಾಡಿ ತೋರಿಸಲು ಸಾಧ್ಯವಿದೆ. ನಮ್ಮಂಥವರು ಪ್ರಯತ್ನಪಟ್ಟರೆ ಈ ಆನೆಯಂಥ ಅಷ್ಟು ದೊಡ್ಡ ದೇಹವಿರುವ ಪರಮ ಮೂಢನನ್ನು ಸಾಯಿಸಿಬಿಡಬಹುದು. ಬುದ್ಧಿವಂತಿಕೆ ಇದ್ದರೆ ಅದೆಲ್ಲ ಬಹು ಸುಲಭ. ನಾನು ಹೇಳಿದಂತೆ ಮಾಡಿರಿ. ತುಂಬಿಯೇ, ನೀನು ಝುಂಕಾರ ಮಾಡುತ್ತಾ ಹೋಗಿ ಆನೆಯ ಕಣ್ಣಿನ ಮುಂದೆ ಹಾರಾಡಿ ಕಚ್ಚುವಂತೆ ನಟಿಸು. ಆಗ ಆನೆ ಕಣ್ಣು ಮುಚ್ಚುತ್ತದೆ. ಅದೇ ಹೊತ್ತಿಗೆ ಮರಕುಟಿಗ ಅದರ ಒಂದು ಕಣ್ಣನ್ನು ಚುಚ್ಚಿಬಿಡಲಿ. ಆನೆ ಗಾಬರಿಯಾಗಿ ಎರಡನೇ ಕಣ್ಣನ್ನು ಕೂಡಾ ಮುಚ್ಚಿಕೊಂಡು ಓಡಲಾರಂಭಿಸುತ್ತದೆ. ಮರಕುಟಿಗ ಹಕ್ಕಿ ಅದರೊಂದಿಗೆ ಹಾರುತ್ತಾ ಹೋಗಿ ಅದರ ಎರಡನೇ ಕಣ್ಣು ಕೂಡಾ ಚುಚ್ಚಿಬಿಡಲಿ. ಆಗ ಆನೆ ಉರಿಯಿಂದಲೂ ನೋವಿನಿಂದಲೂ ನೀರಿನ ಮಡುವಿನಲ್ಲಿ ಸೇರಿಕೊಳ್ಳಬೇಕೆಂದು ಹುಚ್ಚು ಹಿಡಿದಂತೆ ಆಚೆಗೂ ಈಚೆಗೂ ಓಡುತ್ತದೆ. ಆ ಸಮಯಕ್ಕೆ ನಾನು ಒಂದು ಅಗಾಧವಾದ ಕಣಿವೆಯ ಬದಿಯಲ್ಲಿ ಕುಳಿತುಕೊಂಡು ಬೆಕಬೆಕನೆ ಶಬ್ದ ಮಾಡುತ್ತೇನೆ. ನಾನು ಕೂಗುವ ದಿಕ್ಕಿನಲ್ಲಿ ನೀರಿರುವುದೆಂದು ಆ ಕುರುಡು ಆನೆ ಓಡುತ್ತಾ ಬಂದು ಅಗಾಧವಾದ ಕಣಿವೆಯೊಳಗೆ ಬಿದ್ದು ಸದ್ದಡಗಿ ಹೋಗುತ್ತದೆ."

ಕಪ್ಪೆ ಹೇಳಿದ ಹಾಗೆಯೇ ತುಂಬಿಯೂ, ಮರಕುಟಿಗ ಹಕ್ಕಿಯೂ ಮಾಡಿದುವು. ಕಡೆಗೆ ಗರ್ವದ ಆನೆ ಪಾತಾಳಕ್ಕೆ ಬಿದ್ದು ಸತ್ತುಹೋಯಿತು.

ತನ್ನ ಮಡದಿ ಹೇಳಿದ ಗುಬ್ಬಚ್ಚಿ ಮತ್ತು ಆನೆಯ ಕಥೆಯನ್ನು ಕೇಳಿ ಟಿಟ್ಟಿಭವು "ಸರಿ, ನನ್ನ ಮಿತ್ರರನ್ನೆಲ್ಲಾ ಸಮಾವೇಶಗೊಳಿಸುತ್ತೇನೆ. ಆಮೇಲೆ ಎಲ್ಲರೂ ಕೂಡಿ ಸಮುದ್ರವನ್ನು ಒಣಗಿಸಿಬಿಡುತ್ತೇವೆ." ಎಂದು ಹೇಳಿತು.

ಆಮೇಲೆ ಅದು ಎಲ್ಲಾ ಪಕ್ಷಿಗಳನ್ನೂ ಕರೆದು ಸಮುದ್ರವು ತನ್ನ ಮೊಟ್ಟೆಗಳನ್ನು ನುಂಗಿ ಹಾಕುವ

ಅನ್ಯಾಯವನ್ನು ಕುರಿತು ಹೇಳಿತು. ಸಮುದ್ರಕ್ಕೆ ತಕ್ಕ ಪ್ರತೀಕಾರ ಮಾಡಲು ಎಲ್ಲಾ ಪಕ್ಷಿಗಳೂ ಸಮುದ್ರದ ನೀರನ್ನು ತಮ್ಮ ತಮ್ಮ ಕೊಕ್ಕುಗಳಿಂದ ಹೀರಿ ಸಮುದ್ರವನ್ನು ಬತ್ತಿಸಲು ಪ್ರಯತ್ನ ಮಾಡಿದುವು. ಅದರಿಂದ ಏನೂ ಪ್ರಯೋಜನವಿಲ್ಲದೆ ಹೋದುದನ್ನು ನೋಡಿ ಸಮುದ್ರವನ್ನು ತಮ್ಮ ರೆಕ್ಕೆಗಳಿಂದ ಪಟಪಟನೆ ಹೊಡೆದುವು. ಅದೂ ಉಪಯೋಗವಿಲ್ಲದೆ ಹೋದ ಮೇಲೆ ಮಣ್ಣಿನ ಉಂಡೆಗಳನ್ನು ತಂದು ತಂದು ಸಮುದ್ರದಲ್ಲಿ ಹಾಕತೊಡಗಿದುವು. ಅವುಗಳ ಈ ಪ್ರಯತ್ನಗಳನ್ನು ನೋಡಿ ಎಲ್ಲಾ ಪ್ರಾಣಿಗಳೂ ನಕ್ಕುವು. ಹಕ್ಕಿಗಳಿಗೆ ಯೋಚನೆ ಹಿಡಿಯಿತು.

ಇಷ್ಟೆಲ್ಲ ಮಾಡಿದರೂ ಕಾಸಿನ ಪ್ರಯೋಜನವಿಲ್ಲದಿರುವುದನ್ನು ನೋಡಿ, ಒಂದು ವಿವೇಕವುಳ್ಳ ಪಕ್ಷಿ ಇತರ ಪಕ್ಷಿಗಳನ್ನು ಕುರಿತು, "ನಮ್ಮಷ್ಟಕೆ ನಾವು ಎಷ್ಟು ಪೇಚಾಡಿದರೂ ಸಮುದ್ರವನ್ನು ಮಣಿಸಲು ಸಾಧ್ಯವೇ ಇಲ್ಲ. ಅತ್ತಕಡೆ ಒಂದು ಆಲದಮರದ ಆಶ್ರಯದಲ್ಲಿ ಒಂದು ಮುದಿ ಬಾತು ಕೋಳಿಯಿದೆ. ಅನುಭವಶಾಲಿಯಾದ ಅದು ನಮಗೆ ತಕ್ಕ ಆಲೋಚನೆ ಹೇಳಬಹುದು. ಒಂದುಸಾರಿ ಅದು ತನ್ನ ಆಲೋಚನೆ ಹೇಳಿ ಒಂದು ಬಾತು ಕೋಳಿಗಳ ಮಂದೆಯನ್ನು ಬಿಡುಗಡೆ ಮಾಡಿಸಿದೆ. ಆದುದರಿಂದ ನಾವು ಅದರ ಆಲೋಚನೆ ಕೇಳೋಣ" ಎಂದಿತು.

"ಹಿಂದೆ ಅದು ಏನು ಆಲೋಚನೆ ಹೇಳಿತು ?" ಎಂದು ಇತರ ಪಕ್ಷಿಗಳು ಕೇಳಿದುವು. ವಿವೇಕವಿದ್ದ ಪಕ್ಷಿ ಈ ರೀತಿಯಾಗಿ ಹೇಳಿತು :

## ಮುದಿಬಾತು ಕೋಳಿಯ ಕತೆ

ಆ ಕಾಡಿನಲ್ಲಿರುವ ಆಲದಮರವು ಬಹಳ ವರ್ಷ ಹಿಂದಿನದು. ಅದಕ್ಕೆ ಲೆಕ್ಕವಿಲ್ಲದಷ್ಟು ಶಾಖೆಗಳಿವೆ. ಆ ಮರದ ಬುಡದಲ್ಲಿ ಯಾವುದೋ ಒಂದು ಕಾಡು ಬಳ್ಳಿ ಮೊಳೆತು ಬೆಳೆಯ ತೊಡಗಿತು. ಅದನ್ನು ನೋಡಿ ಮುದಿಬಾತು ಹೆಣ್ಣುಬಾತು ಕೋಳಿಗಳನ್ನು ನೋಡಿ, "ಈ ಬಳ್ಳಿ ಬೆಳೆದು ಮರವನ್ನು ಸುತ್ತಿಕೊಂಡು ಮೇಲಕ್ಕೆ ಹತ್ತಿದರೆ ಅದರ ಸಹಾಯದಿಂದ



ಶತ್ರುಗಳು ಮರದ ಮೇಲೆ ಹತ್ತಿ ಬಿಡುತ್ತಾರೆ. ಅದು ದರಿಂದ ಈಗಲೇ ಈ ಬಳ್ಳಿಯನ್ನು ಮುರಿದು ಬಿಸುಡಬೇಕು. ಬೆಳೆದ ಮೇಲೆ ಮುರಿದು ಹಾಕಲಿಕ್ಕೂ ಸಾಧ್ಯವಾಗದು" ಎಂದಿತು.

ಅದಕ್ಕೆ ಹೆಣ್ಣು ಬಾತುಗಳು ನಕ್ಕು, "ಈ ಬಳ್ಳಿ ನಮಗೇನು ಕೇಡು ಮಾಡಬಹುದು?" ಎಂದು ಅಲಕ್ಷ್ಯದಿಂದ ಸುಮ್ಮನಿದ್ದುವು. ಬಳ್ಳಿ ಬೆಳೆದು ಮರದ ಮೇಲೆ ಹೋಗಿ ಹರಡಿಕೊಂಡಿತು. ಒಂದುದಿನ ಒಬ್ಬ ಬೇಡನು ಆ ಬಳ್ಳಿಯನ್ನು ಹಿಡಿದುಕೊಂಡು ಮರದ ಮೇಲೆ ಹತ್ತಿಬಿಟ್ಟನು. ಆಗ ಬಾತು ಕೋಳಿಗಳು ಅಲ್ಲಿರಲಿಲ್ಲ. ಬೇಡನು ಉರುಳು ಹಗ್ಗಗಳನ್ನು ತಯಾರಿಸಿ ಮರದಲ್ಲೆಲ್ಲ ಇಳಿಬಿಟ್ಟು ಸಪ್ಪಳಿಲ್ಲದೆ ಹೊರಟುಹೋದನು. ಬಾತು ಕೋಳಿಗಳು ಹಿಂದಿರುಗಿ ಬಂದು ಆ ಹಗ್ಗದ ಉರುಳುಗಳೊಳಗೆ ಸಿಕ್ಕಿಕೊಂಡು ಬಿಟ್ಟುವು. ತಪ್ಪಿಸಿಕೊಳ್ಳಲು ಮಾಡಿದ ಅವುಗಳ ಪ್ರಯತ್ನವೆಲ್ಲಾ ವ್ಯರ್ಥವಾಯಿತು.

"ನನ್ನ ಮಾತು ಕೇಳದುದರಿಂದ ಈ ಗತಿಬಂದಿತು" ಎಂದು ಮುದಿಬಾತು ಕೋಳಿ ಹೇಳಿತು. ಉಳಿದ ಬಾತುಗಳು "ನಿಜವೇ. ಇನ್ನೇನು ಮಾಡುವುದು? ಈಗ ಈ ಆಪತ್ತಿನಿಂದ ತಪ್ಪಿಸುವ ಉಪಾಯ ಹೇಳಯ್ಯಾ. ನಿನ್ನ ದಮ್ಮಯ್ಯ!" ಎಂದುವು. ಆಗ ಮುದಿ ಬಾತು ಕೋಳಿ "ಈಗ ನಾವೆಲ್ಲಾ ಕದಲದೆ ಮಿಸಲದೆ ಸತ್ತ ಹಾಗೆ ನಟಿಸಬೇಕು. ಆಮೇಲೆ ಬೇಡನು ಬಂದು ನಾವೆಲ್ಲಾ ಸತ್ತೆವೆಂದುಕೊಂಡು ಒಂದೊಂದನ್ನೇ ಉರುಳಿನಿಂದ ತೆಗೆದು ಕೆಳಗೆ ಹಾಕುತ್ತಾನೆ. ಆಮೇಲೆ ನಾವೆಲ್ಲಾ ಒಟ್ಟಿಗೆ ಹಾರಿ ಹೋಗೋಣ. ಈಗ ನಾವು ತಪ್ಪಿಸಿಕೊಳ್ಳಲು ಇದೊಂದೇ ಉಪಾಯವಿದೆ" ಎಂದು ಹೇಳಿತು.

ಮರುದಿನ ಬೆಳಿಗ್ಗೆ ಬೇಡನು ದೊಡ್ಡ ಬುಟ್ಟಿಯೊಂದಿಗೆ ಬಂದು, ಬಾತುಗಳೆಲ್ಲ ಉಸಿರುಕಟ್ಟಿ ಸತ್ತಿವೆಯೆಂದುಕೊಂಡು ಉರುಳುಬಿಚ್ಚಿ ಒಂದೊಂದನ್ನೇ ತೆಗೆದು ಕೆಳಗೆ ಹಾಕಿದನು. ಎಲ್ಲವನ್ನೂ ಕೆಳಗೆ ಹಾಕಿದ ಮೇಲೆ ಅವನು ಮರದಿಂದ ಕೆಳಗಿಳಿಯುವಾಗ ಎಲ್ಲ ಬಾತು ಕೋಳಿಗಳೂ ಒಮ್ಮೆಗೇ ಎಗರಿ ಹಾರಿ ಹೋಗುವುದನ್ನು ನೋಡಿ ಆಶ್ಚರ್ಯಪಟ್ಟನು.

ಈ ಕಥೆಯನ್ನು ಕೇಳಿದ ಮೇಲೆ ಹಕ್ಕಿಗಳೆಲ್ಲ ಹೋಗಿ ಮುದಿಬಾತು ಕೋಳಿಯೊಡನೆ ಮಾತಾಡಿದುವು. ಸಮುದ್ರವು ಉಕ್ಕಿ ಟಿಟ್ಟಿಭದ ಮೊಟ್ಟೆಗಳನ್ನು ನುಂಗುವ ಸಂಗತಿ ಹೇಳಿ, ಉಪಾಯ ಕೇಳಿದುವು.

"ನಾವೆಲ್ಲಾ ಹೋಗಿ ಪಕ್ಷಿರಾಜನೂ ಮಹಾವಿಷ್ಣುವಿಗೆ ವಾಹನನೂ ಆದ ಗರುತ್ಮಂತನೆಂದು ಪ್ರಸಿದ್ಧನಾದ ಗರುಡನನ್ನು ನೋಡ್ಡೋಣ. ಅವನು ತುಂಬ ದಯೆಯುಳ್ಳವನು. ತಕ್ಕ ದಾರಿ ತೋರಿಸುತ್ತಾನೆ" ಎಂದಿತು ಮುದಿಬಾತುಕೋಳಿ.






# ನರಪಿಶಾಚಿಗಳು

ಛಲದಂಕನಾದ ತ್ರಿವಿಕ್ರಮನು ಮತ್ತೆ ಮರದ ಬಳಿಗೆ ಹೋಗಿ, ಕೊಂಬೆಯಲ್ಲಿ ನೇತಾಡುತ್ತಿದ್ದ ಶವವನ್ನು ಕೆಳಗಿಳಿಸಿ ತನ್ನ ಭುಜದ ಮೇಲೇರಿಸಿಕೊಂಡು, ಎಂದಿನಂತೆ ಮೌನವಾಗಿ ಸ್ಮಶಾನದ ಕಡೆಗೆ ನಡೆಯತೊಡಗಿದನು. ಆಗ ಶವದೊಳಗೆ ಆವಾಹಿತವಾಗಿದ್ದ ಬೇತಾಳವು ಮಾತಾಡಲು ತೊಡಗಿ, "ಎಲೈ ಮಹಾರಾಜನೆ, ಮಾನವರಿಗೆ ಸಾಧಾರಣವಾಗಿರುವುದಕ್ಕಿಂತ ಅತೀತವಾಗಿ ಶಕ್ತಿಗಳು ಬಂದುಬಿಟ್ಟರೆ ದುರಹಂಕಾರವು ಬಂದುಬಿಡುತ್ತದೋ ಏನೋ? ಇದಕ್ಕೆ ನಿದರ್ಶನವಾಗಿ ಪ್ರವೀಣನ ಕಥೆ ಹೇಳುತ್ತೇನೆ. ನಿನಗೆ ಅದು ಎಚ್ಚರಿಕೆ ಕೊಡಬಹುದಷ್ಟೆ? ಕೇಳುತ್ತಾ ನಡಿಗೆಯ ಶ್ರಮವನ್ನು ಕೂಡಾ ಮರೆಯಬಹುದು" ಎಂದು ಹೀಗೆ ಕಥೆಯನ್ನು ಪ್ರಾರಂಭ ಮಾಡಿತು:

ಒಂದುಕಾಲದಲ್ಲಿ ಸುವರ್ಣಗಿರಿ ರಾಜ್ಯವನ್ನು ಪಾಲಿಸಿಕೊಂಡಿದ್ದ ರಾಜಸಿಂಹ ಮಹಾರಾಜನು ಬಹಳ ಅಸಮರ್ಥನಾಗಿದ್ದನು. ಅವನು ರಾಜಕೀಯ ವ್ಯವಹಾರಗಳೆಲ್ಲವನ್ನೂ ಬೇರೆಬೇರೆ ಉದ್ಯೋಗಸ್ಥರ ತಲೆಯ ಮೇಲೆಯೇ ಹಾಕಿಬಿಟ್ಟು, ಯಾವ ಗೊಡವೆಯನ್ನೂ ಹಚ್ಚಿಕೊಳ್ಳದೆ, ತಾನಾಯಿತು ತನ್ನ ಸುಖ

## ಬೇತಾಳ ಕಥೆಗಳು




ಭೋಗಗಳಾಯಿತು ಎಂಬಂತಿದ್ದುಬಿಟ್ಟನು. ಪರಿಪಾಲನೆಗಳೆಲ್ಲ ಯಾವ ಅಧಿಕಾರಿಗೆ ಹೇಗೆ ಇಷ್ಟವೋ ಹಾಗೆಯೇ ನಡೆಯತೊಡಗಿತು. ಅಲಂಕಾರಕ್ಕಾಗಿ ದಿನಾ ಒಂದುಸಾರಿ ಸಭೆ ಗೂಡಿಸುತ್ತಿದ್ದನು. ಹೀಗಾಗಿ ರಾಜ್ಯದಲ್ಲೆಲ್ಲಾ ಒಂದೇಸಮನೆ ಅನೀತಿಗಳೂ ಅಕ್ರಮಗಳೂ ನಡೆಯುತ್ತಿದ್ದುವು. ಮಂತ್ರಿಗಳಿಂದ ಹಿಡಿದು ದ್ವಾರಪಾಲಕರವರೆಗೂ ಅನ್ಯಾಯದ ಮಾರ್ಗದಲ್ಲೇ ನಡೆಯುತ್ತಿದ್ದರು. ರಾಜ್ಯಕ್ಕೆ ಸಂಬಂಧಿಸಿದ ಉದ್ಯೋಗಿಗಳೆಲ್ಲರೂ ಪ್ರಜೆಗಳನ್ನು ಪೀಡಿಸಿ ಕಾಡಿಸಿ ತಿಂದುಕೊಂಡಿದ್ದರು. ಅಧರ್ಮವು ನಾಲ್ಕು ಪಾದಗಳನ್ನೂ ಊರಿ ನಾಟ್ಯವಾಡತೊಡಗಿತು. ಇದಾವುದೂ ರಾಜನಿಗೆ ಗೊತ್ತಾಗುತ್ತಲೇ ಇರಲಿಲ್ಲ. ರಾಜೋದ್ಯೋಗಿಗಳ ಮೇಲೆ ರಾಜನಿಗೆ ಗಟ್ಟಿ ವಿಶ್ವಾಸ. ಅವರೆಲ್ಲರೂ ನಿಕಟ ರಾಜಭಕ್ತರೆಂದೇ ತಿಳಿದಿದ್ದನು.

ಸುವರ್ಣಗಿರಿಯಲ್ಲೇ ಒಬ್ಬ ಬಡ ಬ್ರಾಹ್ಮಣನಿಗೆ ಪ್ರವೀಣನೆಂಬ ಒಬ್ಬ ಮಗನಿದ್ದ. ಚಿಕ್ಕಂದಿನಿಂದಲೇ ತನ್ನ ಮಗನಿಗೆ ಒಳ್ಳೆಯ ಬುದ್ಧಿ ಕುಶಲತೆಯೂ ಜ್ಞಾಪಕ ಶಕ್ತಿಯೂ ಇರುವುದನ್ನು ನೋಡಿ ತಂದೆ ಅವನಿಗೆ ಸಕಲ ಶಾಸ್ತ್ರಗಳನ್ನೂ ಕಲಿಯಲು ಅವಕಾಶ ಮಾಡಿ ಕೊಟ್ಟನು. ಬೆಳೆಯುತ್ತಾ ಬಂದ ಹಾಗೆ ಪ್ರವೀಣನು ತನ್ನ ಸ್ವಂತ ಪ್ರಯತ್ನದಿಂದಲೂ, ಎಲ್ಲೆಲ್ಲಿರುವ ವಿದ್ಯಾಪೀಠಗಳಿಗೆ ಹೋಗಿ ಚಾಕರಿ ಮಾಡಿ ಅಲ್ಲಿಯವರ ಆದರಕ್ಕೆ ಪಾತ್ರನಾಗಿ, ವಿಶೇಷ ವಿದ್ಯೆಗಳನ್ನು ಕೂಡಾ ಕಲಿತು ಅಪಾರ ಪಾಂಡಿತ್ಯವನ್ನು ಸಂಪಾದಿಸಿಕೊಂಡು ಮನೆಗೆ ಹಿಂದಿರುಗಿದನು.

ಮಹಾಪಂಡಿತನಾಗಿ ಮನೆಗೆ ಬಂದ ತನ್ನ ಮಗನು, ತನ್ನ ಪಾಂಡಿತ್ಯದ ಮೂಲಕವಾಗಿ ಜೀವನೋಪಾಧಿಯನ್ನು ಕಲ್ಪಿಸುವನೆಂದೂ, ತನ್ನ ಮನೆಯ ಬಡತನವು ನೀಗುವುದೆಂದೂ ತಂದೆ ಎದುರು ನೋಡಿದ್ದನು. ಆದರೆ ಹಾಗೇನೂ ನಡೆಯಲಿಲ್ಲ. ಪ್ರವೀಣನು ವಿದ್ಯೆಗಳಿಂದ ತುಂಬಿದ ಕೊಡವಾಗಿ ಮನೆಗೆ ಬಂದು, ಕ್ರಮೇಣ ಸಪ್ಪಗಾಗಿಬಿಟ್ಟನು. ತನ್ನ ಸುತ್ತಲೂ ಇರುವವರ ಜೀವನ ವಿಧಾನವನ್ನು ನೋಡುತ್ತ ಗಾಢ ವಿಚಾರದಲ್ಲಿ ಮುಳುಗಿದವನಂತೆ ತೆಪ್ಪಗಿದ್ದನು.

"ಏನಪ್ಪಾ ಇದು ? ನಾವು ಬಡವರೆಂಬುದನ್ನು ಮರೆತೆಯಾ ? ನಿನ್ನ ವಿದ್ಯೆಯಿಂದಲೇ ನಮಗಿನ್ನು ಒಳ್ಳೆಯ ಜೀವಿತವು ಏರ್ಪಡಬೇಕಾಗಿದೆ. ನೀನೂ ಸುಖಪಡಬೇಕು. ಅದರಿಂದ ನಮಗೂ ಸುಖ ಬರಬೇಕು. ನಿನ್ನ ಪಾಂಡಿತ್ಯವನ್ನು ಪ್ರದರ್ಶನ ಮಾಡಿ ಸನ್ಮಾನಗಳನ್ನೂ, ಸತ್ಕಾರಗಳನ್ನೂ ಪಡೆಯುವುದು ಬಿಟ್ಟು ಮನೆಯಲ್ಲೇ ಕುಳಿತು ಸಾರನ್ನ ತಿಂದುಕೊಂಡಿದ್ದರೆ ಹೇಗಪ್ಪಾ ?" ಎಂದ ತಂದೆ.

"ಅಪ್ಪಾ, ಎಲ್ಲಾ ನೋಡುವಾಗ ನನ್ನ ಓದುಬರೆಹಗಳೆಲ್ಲಾ ವ್ಯರ್ಥವೆಂದೇ ಕಾಣುತ್ತದೆ. ಎಲ್ಲರ ಜೀವಿತವನ್ನು ನೋಡುತ್ತಿದ್ದಂತೆ ನನಗೆ ಜೀವನದ ಮೇಲೆಯೇ ವಿರಕ್ತಿ ಹುಟ್ಟುತ್ತಿದೆ. ನಾನು ನನ್ನ ಪಾಂಡಿತ್ಯವನ್ನು ಪ್ರದರ್ಶನ ಮಾಡಿ ಯಾರಿಂದ ಸನ್ಮಾನ ಹೊಂದಲಿ ?

ನನ್ನನ್ನು ಸನ್ಮಾನಿಸತಕ್ಕವರೆಲ್ಲ ಹೇಗಿದ್ದಾರೆಂದು ನನಗೆ ಗೊತ್ತಾಗಿ ಹೋಯಿತು ಬಿಡಿ" ಎಂದ ಪ್ರವೀಣ.

ಮಗನು ಹೇಳುವ ಮಾತಿನ ಧೋರಣೆಯನ್ನು ನೋಡಿ, ಅವನ ಪಾಂಡಿತ್ಯವನ್ನು ಕುರಿತು ತಂದೆಗೆ ಅನುಮಾನವಾಯಿತು. ಪ್ರವೀಣ ಕಲಿತ ವಿದ್ಯೆಯಲ್ಲಿ ಏನೋ ಲೋಪವಿರಬೇಕೆನಿಸಿತು. ಅಂತೆಯೇ ಅವನು ತನಗೆ ತಿಳಿದ ಕೆಲಮಂದಿ ಪಂಡಿತರನ್ನು ಕರೆದುಕೊಂಡು ಬಂದು ಅವರೊಂದಿಗೆ ತನ್ನ ಮಗನಿಗೆ ಚರ್ಚೆ ಏರ್ಪಡುವಂತೆ ಮಾಡಿದನು. ಅವರು ಪ್ರವೀಣ ನೊಂದಿಗೆ ವಿದ್ಯೆಗಳ ವಿಷಯವಾಗಿ ಸ್ವಲ್ಪ ಹೊತ್ತು ಮಾತಾಡಿದ ಕೂಡಲೇ ಅವನು ತುಂಬಿದ ಕೊಡ ವೆಂಬುದು ತಿಳಿದುಹೋಯಿತು. ಅವರು ಅವನ ತಂದೆ ಯೊಂದಿಗೆ, "ಅಯ್ಯಾ, ಪುಣ್ಯಾತ್ಮ, ಉತ್ತಮ ಪುತ್ರ ರತ್ನವನ್ನೇ ಪಡೆದಿದ್ದೀಯೇ! ನಿನ್ನ ಮಗನು ಉದ್ಧಂಡ ಪಂಡಿತ. ಸಂದೇಹವೇ ಇಲ್ಲ!" ಎಂದು ಹೇಳಿ ಹೊರಟು ಹೋದರು.

ಪ್ರವೀಣನ ಪ್ರತಿಭೆಯ ವಿಷಯ ಆ ಪಂಡಿತರ ಬಾಯಿಯಲ್ಲಿ ಸುಮ್ಮನಿರಲಿಲ್ಲ. ಅದು ಕಿವಿಯಿಂದ ಕಿವಿಗೆ ಹೋಗಿ ರಾಜನಿಗೂ ಗೊತ್ತಾಯಿತು. ತನ್ನ ರಾಜ್ಯದ ಹೊಸ ಪಂಡಿತನನ್ನು ಸನ್ಮಾನಿಸುವುದು ರಾಜಮನೆತನಕ್ಕೆ ಗೌರವಪ್ರದವೆಂದು ಭಾವಿಸಿ ರಾಜನು ಪ್ರವೀಣನಿಗೆ ಪ್ರತ್ಯೇಕ ಆಹ್ವಾನವನ್ನು ಕಳುಹಿಸಿ ಕೊಟ್ಟನು. ಅದನ್ನು ನೋಡಿ ಪ್ರವೀಣನ ತಂದೆಗೆ ಬಹಳ ಸಂತೋಷವಾಯಿತು. ಆದರೆ ಪ್ರವೀಣನು ಮಾತ್ರ ರಾಜನ ಆಹ್ವಾನವನ್ನು ಸ್ವೀಕರಿಸಿ ರಾಜ ಸಭೆಗೆ ಹೋಗುವ ಉತ್ಸಾಹವನ್ನು ತೋರಿಸಲಿಲ್ಲ. ಹೋಗುವುದೇ ಬೇಡವೆಂತಲೂ ಹೇಳಿಬಿಟ್ಟ. ಕಡೆಗೆ ತಂದೆ ಎಷ್ಟೋ ವಿಧವಾಗಿ ಹೇಳಿ ಒತ್ತಾಯ ಮಾಡಿದ ಮೇಲೆ ಹೊರಟ.

ತಂದೆಯೇ ಅವನನ್ನು ರಾಜಸಭೆಗೆ ಕರೆದುಕೊಂಡು ಹೋದನು. ಪ್ರವೀಣನು ರಾಜನನ್ನು ನೋಡಿ ನಮ



ಸ್ಕಾರ ಕೂಡಾ ಮಾಡದೆ, "ನನ್ನನ್ನೇಕೆ ಕರೆಸಿದಿರಿ?" ಎಂದು ಕೇಳಿದ. ಅವನ ಈ ಅವಮರ್ಯಾದೆಯ ಪ್ರಶ್ನೆ ಕೇಳಿ ಸಭೆಯವರೆಲ್ಲ ಬೆರಗಾದರು. ಪ್ರವೀಣನ ತಂದೆಯ ಕಾಲುಗಳು ನಡುಗತೊಡಗಿದುವು.

ರಾಜನೇನೂ ಕೋಪವನ್ನು ತೋರಿಸದೆ, "ನೀನು ದೊಡ್ಡ ಪಂಡಿತನೆಂದು ಕೇಳಿ ನಿನ್ನನ್ನು ಘನವಾಗಿ ಸತ್ಕರಿಸಬೇಕೆಂದು ಕರೆಯಿಸಿದ್ದೇನೆ" ಎಂದನು. ಅದನ್ನು ಕೇಳಿ ಪ್ರವೀಣನು ಗಹಗಹಿಸಿ ನಕ್ಕನು. ರಾಜನು ಹುಬ್ಬುಗಂಟಿಕ್ಕಿ ಅಸಹನೆಯಿಂದ, "ಹೀಗೆ ನಗಲಿಕ್ಕೆ ಏನಾಯಿತು?" ಎಂದು ಕೇಳಿದ.

"ನಿಮ್ಮಂಥ ರಾಜರನ್ನು ನೋಡಿ ನಗಾಡದಿರಲು ಸಾಧ್ಯವಾಗಲಿಲ್ಲ. ನಿಮ್ಮ ಪರಿಪಾಲನೆಯಲ್ಲಿ ಪ್ರಜೆಗಳು ಹೊಟ್ಟೆಗಿಲ್ಲದೆ ನರಳುತ್ತಿದ್ದಾರೆ. ನಿಮ್ಮ ಅಧಿಕಾರಿಗಳು ಅವರ ರಕ್ತವನ್ನು ಜಿಗಳೆಗಳ ಹಾಗೆ ಹೀರುತ್ತಿದ್ದಾರೆ. ನಿಮ್ಮ ಬೊಕ್ಕಸದ ತುಂಬಾ ಪ್ರಜೆಗಳಿಂದ ದೋಚಿದ ಹಣವಿದೆ. ಇಂತಹ ಒಬ್ಬ ಅಸಮರ್ಥ ರಾಜನ



ಕೈಯಿಂದ ಬರುವ ಅನ್ಯಾಯದ ಧನದಿಂದ ಸನ್ಮಾನ ಪಡೆಯುವುದೆಂದರೆ ನಗುವುದಲ್ಲದೆ ಮತ್ತೇನು ಮಾಡಲಿ?" ಎಂದ ಪ್ರವೀಣ.

ರಾಜನಿಗೆ ಮಹಾಸಿಟ್ಟು ಬಂದು, "ಎಲವೋ ಮೂರ್ಖನೇ! ತಲೆ ಸರಿಯಿದ್ದೇ ಮಾತಾಡುವೆಯಾ? ಯಾರ ಮುಂದೆ ನಿಂತು ಮಾತಾಡುವೆಯೆಂಬುದನ್ನು ಕೂಡಾ ತಿಳಿಯಲಾರದ ನೀನು ಒಬ್ಬ ಪಂಡಿತನೆ? ನೀನು ಹೇಳಿದ ಹಾಗೆ ನನ್ನ ಪರಿಪಾಲನೆ ಅಸಮರ್ಥವಾಗಿದ್ದರೆ ನೀನು ಅದನ್ನು ಸರಿಮಾಡು. ನಿನ್ನ ಆರೋಪಣೆಗಳು ನಿಜವೆಂದು ನಿರೂಪಿಸು. ಇಲ್ಲದಿದ್ದರೆ ನಿನ್ನನ್ನು ಕ್ರೂರವಾಗಿ ಶಿಕ್ಷಿಸಿ ದೇಶದಿಂದ ಬಹಿಷ್ಕರಿಸಿಬಿಡುತ್ತೇನೆ" ಎಂದನು. ಅದಕ್ಕೇನೂ ಉತ್ತರ ಕೊಡದೆ ಹೇಳನವಾಗಿ ನಕ್ಕು ಮುಖವನ್ನು ರಾಜನ ವಿರುದ್ಧ ತಿರುಗಿಸಿದ ಪ್ರವೀಣ.

"ಈ ಅವಿಧೇಯನಿಗೆ ಐವತ್ತು ಕೊರಡೆಯೇಟು ಕೊಟ್ಟು ದೇಶದಿಂದ ಹೊರಗೆ ದೂಡಿರಿ!" ಎಂದು ರಾಜನು ತನ್ನ ಭಟರಿಗೆ ಆಜ್ಞೆ ಮಾಡಿದನು. ಪ್ರವೀಣನು ಬಾಯಿ ಮುಚ್ಚಿಕೊಂಡು ಕೊರಡೇಯೇಟುಗಳ ಶಿಕ್ಷೆ ಅನುಭವಿಸಿ, ದೇಶದಿಂದ ಹೊರಗೆ ಹೋಗಿಬಿಟ್ಟನು. ತನ್ನಿಂದ ತಂದೆಯೂ ದುಃಖಕ್ಕೀಡಾದುದನ್ನು ನೋಡಿ ಅವನ ಮನಸ್ಸು ಮುರಿದು ಹೋಯಿತು. ತನ್ನ ಪಾಂಡಿತ್ಯವು ತನ್ನನ್ನು ಯಾವ ಕೆಲಸಕ್ಕೂ ಉಪಯೋಗವಿಲ್ಲದವನನ್ನಾಗಿ ಮಾಡಿ ತೆಂದುಕೊಂಡು ಅವನು ಇನ್ನು ಸತ್ತುಹೋಗುವುದೇ ಸರಿ ಎಂಬ ನಿಶ್ಚಯಕ್ಕೆ ಬಂದನು.

ದಿಕ್ಕು ದಾರಿ ತಿಳಿಯದೆ ಮೈಮರೆತು ಕಾಲು ಒಯ್ದಂತೆ ಹೋಗುತ್ತಿರುವ ಪ್ರವೀಣನ ಮುಂದೆ ಒಂದು ಸ್ಮಶಾನವೂ, ಉರಿಯುತ್ತಿದ್ದ ಶವದ ಒಂದು ಚಿತೆಯೂ ಕಾಣಿಸಿತು. "ಓಹೋ, ಸ್ಮಶಾನಕ್ಕೆ ಬಂದುಬಿಟ್ಟೆನೆ? ಆ ಚಿತೆಯಲ್ಲೇ ಧುಮುಕಿ ಸತ್ತುಬಿಡುತ್ತೇನೆ" ಎಂದುಕೊಂಡು ಅವನು ಅದರ ಸಮೀಪಕ್ಕೆ ಹೋದನು. ಅಷ್ಟರಲ್ಲಿ ಅವನಿಗೊಂದು ವಿಚಿತ್ರ ದೃಶ್ಯ ಕಾಣಿಸಿತು. ಚಿತೆಯ ಹತ್ತಿರ ಕೆಲವು ಪಿಶಾಚಿಗಳು ಏನೋ ಒಂದು ಮುಖ್ಯವಾದ ಕೆಲಸದಲ್ಲಿ ಮಗ್ನವಾಗಿರುವಂತೆ ತೋರಿತು. ಪ್ರವೀಣನು ಸ್ವಲ್ಪ ದೂರದಲ್ಲಿ ಅಡಗಿ ನಿಂತುಕೊಂಡು ಅವು ಮಾಡುವ ಕಾರ್ಯವನ್ನು ಗಮನಿಸತೊಡಗಿದನು.

ಪಿಶಾಚಿಗಳ ಮುಂದೆ ಎರಡು ತಲೆ ಬುರುಡೆಗಳು ಹತ್ತಿರ ಹತ್ತಿರವಾಗಿ ಇಡಲ್ಪಟ್ಟಿದ್ದುವು. ಅವುಗಳ ಹಣೆಗಳಲ್ಲಿ ಕುಂಕುಮ ಗಂಧಾಕ್ಷತೆಗಳ ಬೊಟ್ಟುಗಳಿದ್ದುವು. ಅವುಗಳ ಮುಂದೆ ಮದುವೆಗೆ ಆಗತ್ಯವಾದ ಮಂಗಳ ವಸ್ತುಗಳೂ ಇದ್ದುವು. ಕೆಲವು ಪಿಶಾಚಿಗಳು ಎಲುವುಗಳಿಂದ ವಾದ್ಯ ಬಾರಿಸತೊಡಗಿದುವು. ಇನ್ನು ಕೆಲವು ಮಂತ್ರ ಹೇಳುತ್ತಿದ್ದುವು. ಆಮೇಲೆ ಕೆಲವು ಪಿಶಾಚಿಗಳು ನೃತ್ಯ ಮಾಡಲು ಪ್ರಾರಂಭಿಸಿದುವು.

ಆ ಪಿಶಾಚಿಗಳನ್ನು ನೋಡುತ್ತಿದ್ದಂತೆ ಪ್ರವೀಣನಿಗೆ ಬಹಳ ಸಂತೋಷವಾಯಿತು. ಮಾನವರ ಬಾಳುವೆ

ಗಿಂತ ಅವುಗಳ ಬಾಳುವೆ ಉತ್ತಮವಾಗಿದೆಯೆಂದು ತೋರಿತು. ಅವನು ಉತ್ಸಾಹದಿಂದ ಪಿಶಾಚಿಗಳ ಎದುರಿಗೆ ಹೋದನು. ಆಕಸ್ಮಿಕವಾಗಿ ತಮ್ಮ ನಡುವೆ ಬಂದ ಮನುಷ್ಯನನ್ನು ನೋಡಿ, ಪಿಶಾಚಿಗಳೆಲ್ಲ ಅಲ್ಲಲ್ಲೇ ನಿಂತು ಸ್ತಬ್ಧವಾದುವು. ಪ್ರವೀಣನು ನೇರಾಗಿ ಚಿತೆಯಲ್ಲಿ ಹಾರಲು ಹೋದನು.

ಕೂಡಲೇ ಎರಡು ಪಿಶಾಚಿಗಳು ಅವನನ್ನು ಹಿಡಿದು ನಿಲ್ಲಿಸಿ, "ಸಾಯಲಿಕ್ಕೆ ಹಾರುವೆಯಲ್ಲಾ? ಏಕೆ?" ಎಂದು ಕೇಳಿದುವು. "ಸತ್ತರೆ ನಿಮ್ಮ ಹಾಗೇ ಪಿಶಾಚಿಯಾಗಿ ಸುಖಸಂತೋಷಗಳಿಂದ ಇರಬಹುದು, ಅದಕ್ಕೇ" ಎಂದ ಪ್ರವೀಣ.

"ಎಂಥಾ ಹುಚ್ಚನಪ್ಪಾ ನೀನು? ಸತ್ತವರೆಲ್ಲ ಪಿಶಾಚಿಗಳಾಗುತ್ತಾರೆಂದುಕೊಂಡೆಯಾ? ಮಾನವ ಜನ್ಮವೇ ಉತ್ತಮವಾದುದು. ಅಂತಹ ನಿನಗೆ ಸಾಯಬೇಕೆಂದು ತೋರಲು ಏನಾಯಿತೆಂಬುದನ್ನು ಹೇಳು. ನೀನು ಹೇಳುವ ಕಾರಣ ಸರಿಯಾಗಿದ್ದರೆ ಸಾಯಲು ಬಿಡುತ್ತೇವೆ; ಇಲ್ಲದಿದ್ದರೆ ಬಿಡಲಾರೆವು" ಎಂದು ಒಂದು ಪಿಶಾಚಿ ಹೇಳಿತು.

"ನಿಮ್ಮ ಮಾತು ಸರಿಯಲ್ಲ. ಮಾನವ ಜನ್ಮಕ್ಕಿಂತ ಹೀನ ಜನ್ಮ ಬೇರೆ ಯಾವುದೂ ಇಲ್ಲ. ಯಾವ ಪ್ರಾಣಿಯೂ ತನ್ನ ಜಾತಿಯನ್ನು ತಾನೇ ತಿನ್ನುವುದಿಲ್ಲ. ಆ ಕೆಲಸ ಮಾನವನೊಬ್ಬನೇ ಸಾಧಿಸುತ್ತಾನೆ; ಅದೂ ಮರೆಮೋಸದಿಂದ ಸ್ವಲ್ಪ ಸ್ವಲ್ಪವಾಗಿ ಕೊಲ್ಲುತ್ತ. ಮಾನವನಿಗೆ ನೀತಿ ನಿಯಮಗಳೊಂದೂ ಇಲ್ಲ. ಭಿಕ್ಷುಕನು ಕೊಲೆಗಾರನಾಗುತ್ತಾನೆ. ವ್ಯಾಪಾರಿಗಳು ಮೋಸ ಮಾಡುತ್ತಾರೆ. ಅಧಿಕಾರಿಗಳು ಲಂಚದ ಹೆಸರಿನಲ್ಲಿ ರಕ್ತ ಹೀರುತ್ತಾರೆ. ಪಾಲಕ ವರ್ಗದವರು ಪ್ರಜೆಗಳ ರಕ್ತವನ್ನೇ ಧನವನ್ನಾಗಿ ಮಾಡಿಕೊಳ್ಳುತ್ತಾರೆ. ಒಳಗುಟ್ಟು ಗೊತ್ತಾಗದ ಹಾಗೆ ಧರ್ಮದ ಕಣ್ಣುಗಳನ್ನು ಚುಚ್ಚಿ ಕುರುಡು ಮಾಡುತ್ತಾರೆ. ನ್ಯಾಯದ ಬಾಯಿಯನ್ನು ಹೊಲಿದುಬಿಡುತ್ತಾರೆ. ಪಂಡಿತರು ತಮ್ಮ ಪಾಂಡಿತ್ಯವನ್ನು ಮಾರಿ ತಿನ್ನುತ್ತಾರೆ. ಆದುದರಿಂದ ನಾನು ಸತ್ತು ನಿಮ್ಮಲ್ಲಿ ಒಬ್ಬನಾಗಿಬಿಡುತ್ತೇನೆ" ಎಂದ ಪ್ರವೀಣ.



ಪಿಶಾಚಿ ನಕ್ಕು, "ನೀನು ಹೇಳಿದವರೇ ಸತ್ತು ಪಿಶಾಚಿಗಳಾಗುವವರು. ನಿನ್ನಂಥವರಿಗೆ ಪಿಶಾಚಿಗಳಾಗುವ ಅವಕಾಶವೇ ಇಲ್ಲ. ನಾವೆಲ್ಲಾ ನರರೂಪದಲ್ಲಿ ಬದುಕಿರುವಾಗ ನೀನು ಹೇಳಿದಂತಹ ಪಾಪಗಳನ್ನೆಲ್ಲ ಮಾಡಿ ಪಿಶಾಚಿಗಳಾದೆವು. ಇಕೋ, ಇವನು ಕಲಬೆರಿಕೆ ಮಾಡಿದ ವ್ಯಾಪಾರಿ. ಇವನು ಪ್ರಜೆಗಳ ಧನವನ್ನು ಸುಳ್ಳುಗಳಿಂದ ಕೊಳ್ಳೆ ಹೊಡೆದ ರಾಜಕೀಯದ ಉದ್ಯೋಗಸ್ಥ. ಇವನು ವೈದ್ಯ. ಔಷಧಕ್ಕೆ ಬಂದವರ ಹತ್ತಿರ ಹಣ ಸೆಳೆದು, ನೀರು ಮದ್ದು ಕೊಟ್ಟು ದೀರ್ಘಕಾಲದ ರೋಗಿಗಳನ್ನಾಗಿ ಮಾಡಿ, ಹಣವಿಲ್ಲದವರನ್ನು ರೋಗಗಳಿಂದ ಕೊಂದು ಅನೇಕ ಪಾಪಗಳನ್ನು ಮಾಡಿದವನು. ನಾವೆಲ್ಲಾ ಸತ್ತು ಪಿಶಾಚಿಗಳಾದ ಮೇಲೆ ಈಗ ನಮ್ಮಲ್ಲಿ ಸ್ವಾರ್ಥವಿಲ್ಲ;



ಕುತಂತ್ರಗಳಿಲ್ಲ; ಎಲ್ಲರೂ ಕೂಡಿ ಒಗ್ಗಟ್ಟಿನಲ್ಲಿರುತ್ತೇವೆ. ಈ ಪಿಶಾಚೀ ಜನ್ಮವು ಎಷ್ಟೋ ಚೆನ್ನಾಗಿರುವುದು ನಿಜವೇ. ಇದೆಲ್ಲ ನಮಗೆ ನರಜನ್ಮ ತೀರಿದ ಮೇಲೆಯೇ ಗೊತ್ತಾಯಿತು" ಎಂದಿತು.

"ಅದೃಷ್ಟವಿದ್ದರೆ ನಾನೂ ಪಿಶಾಚಿಯಾಗಬಹುದಷ್ಟೆ? ಬಿಡಿ, ಸತ್ತು ನೋಡಿಬಿಡುವೆನು. ನನಗೆ ನಿಮ್ಮ ಹಾಗೆ ಇರಬೇಕೆಂತಲೇ ಇದೆ" ಎಂದ ಪ್ರವೀಣ. ಅದಕ್ಕೆ ಪಿಶಾಚಿ ಹೀಗೆಂದಿತು:

"ನೀನು ಎಷ್ಟು ಮಾತ್ರಕ್ಕೂ ಪಿಶಾಚಿಯಾಗಲಾರೆ. ಈ ತಲೆ ಬುರುಡೆಗಳನ್ನು ನೋಡು. ಇವರಿಬ್ಬರೂ ನರಜನ್ಮದಲ್ಲಿದ್ದಾಗ ಜಾತಿಮತ ಭೇದದನ್ನು ನೋಡದೆ ಒಬ್ಬರನ್ನೊಬ್ಬರು ಮನಸಾರೆ ಪ್ರೇಮಿಸಿಕೊಂಡರು. ಅವರ ತಂದೆ ತಾಯಿಯರು ಅವರ ಮದುವೆಗೆ ಅಂಗೀಕರಿಸಲಿಲ್ಲ. ಆದುದರಿಂದ ಅವರು ಒಬ್ಬ ವೈದ್ಯನ ಕೈಯಿಂದ ವಿಷವನ್ನು ಕೊಂಡುಕೊಂಡು ಅದನ್ನು ಒಂದೇ ಪಾತ್ರದಲ್ಲಿ ಒಟ್ಟಿಗೇ ಕುಡಿದು ಸತ್ತುಹೋದರು. ಆದರೆ ಪಾಪ, ಅವರು ಪಿಶಾಚಿಗಳಾಗಲಾರದೆ ಹೋದರು. ಇವರು ಕೊಟ್ಟ ಹಣಕ್ಕೆ ಆಶೆಪಟ್ಟು ಇವರಿಗೆ ವಿಷ ಕೊಟ್ಟ ವೈದ್ಯನು ಈ ದಿನ ಸತ್ತುಹೋಗಿದ್ದಾನೆ. ಈ ಚಿತೆಯಲ್ಲಿ ಉರಿಯುತ್ತಿರುವುದು ಅವನ ಶವವೇ. ನಾವು ಸತ್ತುಹೋದ ಪ್ರೇಮಿಗಳ ತಲೆ ಬುರುಡೆಗಳನ್ನು ಒಂದುಗೂಡಿಸಿ ಅವುಗಳಿಗೆ ಮದುವೆ ಮಾಡುತ್ತೇವೆ ನೋಡಿದೆಯಪ್ಪ? ಅಂತೂ ನೀನು ಪಿಶಾಚಿಯಾಗಲಾರೆಯಪ್ಪ, ಸುಮ್ಮನೆ ಸಾಯಬೇಡ, ಹೋಗಪ್ಪ"

"ಪಿಶಾಚಿಯಾಗದಿದ್ದರೆ ಬೇಡ. ಮತ್ತೇನಾದರೂ ಆಗುವೆನಂತೆ. ಅಂತೂ ಬದುಕಿರುವ ನರಪಿಶಾಚಿಗಳ ಮಧ್ಯದಲ್ಲಿ ಬದುಕಲು ಸಾಧ್ಯವಿಲ್ಲ. ನಿಮಗಿರುವ ಜ್ಞಾನ ಕೂಡ ಈ ನರಜನ್ಮದಲ್ಲಿ ಕಲಿತ ಪಾಂಡಿತ್ಯದಿಂದ ಬರಲೂ ಇಲ್ಲ. ಸತ್ತೇಬಿಡುತ್ತೇನೆ" ಎನ್ನುತ್ತ ಪ್ರವೀಣನು ಚಿತೆಯ ಮೇಲೆ ಹಾರಿದನು. ಆ ಕ್ಷಣದಲ್ಲೇ ಚಿತೆಯಿಂದ ಎದ್ದು ಬರುವ ಪಿಶಾಚಿ, ಅವನನ್ನು ದೂಡುತ್ತ ಈಚೆಗೆ ಬಂದಿತು. ಆ ಪಿಶಾಚಿ ಸತ್ತುಹೋದ ವೈದ್ಯನೇ.

ಪ್ರವೀಣನು ಕೋಪದಿಂದ, "ಚೀಛೀ! ಎರಡು ಎಳೇ ಪ್ರಾಣಗಳನ್ನು ತೆಗೆದು ಹಾಕಿದ ಪಾಪಿಷ್ಠ ವೈದ್ಯನೇ! ನನ್ನನ್ನು ಸಾಯದಂತೆ ಹಿಂದೆ ದೂಡಲು ನಿನಗೇನು ಅಧಿಕಾರ?" ಎಂದು ಕೇಳಿದ.

"ಅಪ್ಪಾ, ನನ್ನಲ್ಲೀಗ ಅಂತಹ ಪಾಪದ ಆಲೋಚನೆಯೇ ಇಲ್ಲ. ನೀನು ದೊಡ್ಡ ಪಂಡಿತ. ಆತ್ಮಹತ್ಯ ಅಂಜುಕುಳಿಗಳು ಮಾಡುವ ಕೆಲಸ. ಒಳ್ಳೆಯಗುಣ ತುಂಬಿದ ಯುವಕ ನೀನು. ನಿನ್ನನ್ನು ಆತ್ಮಹತ್ಯ ಪಾಪದಿಂದ ತಡೆಯಬೇಕಾದ್ದು ನನ್ನ ಕರ್ತವ್ಯ. ಜೀವನವನ್ನು ಒಳಿತು ಮಾಡಲು ಪ್ರಯತ್ನಿಸುತ್ತ ನಿನ್ನ ನರಜನ್ಮವನ್ನು ಸಾರ್ಥಕಗೊಳಿಸು, ಹೋಗಪ್ಪ" ಎಂದಿತು ವೈದ್ಯ ಪಿಶಾಚಿ. ಪ್ರವೀಣನಿಗೆ ಏನೋ ಹೊಳೆದು ಸ್ವಲ್ಪ ಆಲೋಚನೆ ಮಾಡಿ, "ನಿಜ

ನಿಮ್ಮ ಮಾತು. ನಾನು ಆತ್ಮಹತ್ಯದ ಆಲೋಚನೆ ಬಿಡುತ್ತೇನೆ. ನೀವು ಎಲ್ಲಾ ಪಿಶಾಚಿಗಳೂ ಕೂಡಿ ನನಗೊಂದು ಸಹಾಯ ಮಾಡುವಿರಾ?" ಎಂದು ಕೇಳಿದ. "ಮಾಡುತ್ತೇವೆ, ಅಗತ್ಯವಾಗಿ ಮಾಡುತ್ತೇವೆ" ಎಂದುವು ಪಿಶಾಚಿಗಳು.

"ಹಾಗಾದರೆ ನಗರದಲ್ಲಿ ರಾಜನ ಹೊರತು ಬದುಕಿರುವ ಮುಖ್ಯ ಮುಖ್ಯ ನರಪಿಶಾಚಿಗಳನ್ನೆಲ್ಲಾ ಹೇಗಾದರೂ ಮಾಡಿ ಇಲ್ಲಿಗೆ ಕರೆದು ತನ್ನಿರಿ ನೋಡೋಣ" ಎಂದ ಪ್ರವೀಣ.

"ಇದೋ ತರುತ್ತೇವೆ" ಎಂದು ಪಿಶಾಚಿಗಳೆಲ್ಲಾ ಮಾಯವಾಗಿ ಹೋದುವು. ಮತ್ತೆ ಸ್ವಲ್ಪ ಹೊತ್ತಿನಲ್ಲೇ ನಗರದಲ್ಲಿದ್ದ ಕೆಲವು ನೂರು ಮಂದಿ ಭಾರಿ ಧನವಂತರೆಲ್ಲ ಯಾವುದರಿಂದಲೋ ಓಡಿಸಿಕೊಂಡು ಬಂದವರಂತೆ ಸ್ಮಶಾನದಲ್ಲಿ ಬಂದು ಗುಂಪುಗೂಡಿ ನಡುಗತೊಡಗಿದರು. ಅವರ ಸುತ್ತಲೂ ಇರುವ ಪಿಶಾಚಿಗಳನ್ನು ನೋಡಿ ಎಲ್ಲರೂ ಗಾಳಿಗೆ ಅಲ್ಲಾಡುವ ತರಗೆಲೆಗಳಂತಾಗಿದ್ದರು.

"ನೀವೆಲ್ಲಾ ಪ್ರಜೆಗಳಿಗೆ ಮೋಸ ಮಾಡಿದವರು. ಹೌದೋ ಅಲ್ಲವೋ ಸತ್ಯ ಹೇಳಿದರೆ ಮಾತ್ರ ಬದುಕುವಿರಿ. ನಿಮ್ಮ ಬಾಯಿಯಿಂದಲೇ ಸತ್ಯ ಬರಬೇಕು" ಎಂದ ಪ್ರವೀಣ. ಎಲ್ಲರೂ ಏನೋ ಹೇಳಬೇಕೆಂದು ಬಾಯಿ ತೆರೆಯುವರೇ ಹೊರತು ಶಬ್ದಗಳು ಹೊರಬೀಳಲಿಲ್ಲ. ಶಬ್ದ ಹೊರಡಿಸಲಿಕ್ಕೂ ಧೈರ್ಯವಿಲ್ಲ.

"ಸರಿ, ನಡೆಯಿರಿ. ಎಲ್ಲರೂ ನಿಮ್ಮ ರಾಜನ ಬಳಿಗೆ ನಡೆಯಿರಿ. ರಾಜನ ಎದುರಿನಲ್ಲಿ ಸುಳ್ಳುಗಿಳ್ಳು ಹೇಳಿದರೆ ಈ ಪಿಶಾಚಿಗಳು ನಿಮ್ಮನ್ನು ಕಿತ್ತು ತಿಂದು ಹಾಕುತ್ತವೆ. ನೀವು ಮಾಡಿದ ಅಕ್ರಮ ಅನ್ಯಾಯಗಳನ್ನೆಲ್ಲ ರಾಜನ ಮುಂದೆ ಹೇಳಬೇಕು." ಎಂದು ಪ್ರವೀಣನು ಅವರಿಗೆಲ್ಲ ಎಚ್ಚರಿಕೆ ಹೇಳಿ, ಪಿಶಾಚಿಗಳೊಂದಿಗೆ "ಇವರನ್ನೆಲ್ಲ ರಾಜನ ಬಳಿಗೆ ಕರೆದು ತನ್ನಿ" ಎಂದನು.



ರಾಜನು ಸಿಂಹಾಸನದಲ್ಲಿ ಕುಳಿತಿದ್ದನು. ಆ ಮಹಾಸಭೆಗೆ ದೊಡ್ಡ ದೊಡ್ಡ ಉದ್ಯೋಗಸ್ಥರೂ, ವರ್ತಕ ಪ್ರಮುಖರೂ ಅಪರಾಧಿಗಳ ಹಾಗೆ ನಡುಗುತ್ತ ಬರುವುದನ್ನು ನೋಡಿ ರಾಜನಿಗೆ ಆಶ್ಚರ್ಯವಾಯಿತು. ಸಭೆಯಲ್ಲಿರುವವರಿಗೆ ಮಾತ್ರ ಪಿಶಾಚಿಗಳು ಕಾಣದಂತೆ ಮಾಯವಿದ್ಯೆ ಮಾಡಿದ್ದುವು.

"ನೀವೆಲ್ಲರೂ ಯಾವ ಯಾವ ರೀತಿಯಲ್ಲಿ ರಾಜನನ್ನು ವಂಚಿಸಿ, ಪ್ರಜೆಗಳನ್ನು ಪೀಡಿಸಿ ತಿನ್ನುತ್ತಿದ್ದಿರೆಂಬುದನ್ನು, ನಿಮ್ಮ ನಿಮ್ಮ ಸ್ವಾರ್ಥದ ಕೆಲಸಗಳನ್ನು ವಿವರವಾಗಿ ಹೇಳಿರಿ. ಏನೂ ಮುಚ್ಚುಮರೆ ಮಾಡಬಾರದು. ಜಾಗ್ರತೆ!" ಎಂದು ಪ್ರವೀಣನು ಆ ನರಪಿಶಾಚಿಗಳಿಗೆ ಹೇಳಿದನು.

ತಮ್ಮ ತಮ್ಮ ಹಿಂದೆಯೇ ನಿಂತಿರುವ ಪಿಶಾಚಿಗಳನ್ನು ನೋಡಿ ಹೆದರುತ್ತಿದ್ದ ಎಲ್ಲರೂ ತಾವು ತಾವು ಮಾಡಿದ ಅನ್ಯಾಯದ ಪಾಪಾಚರಣೆಗಳನ್ನು ಹೇಳತೊಡಗಿದರು. ಅದನ್ನೆಲ್ಲ ಕೇಳುತ್ತಿದ್ದಂತೆ ಸುಮ್ಮನೆ

ಸಭೆ ನಡೆಸಿಕೊಂಡು ಅಂತಃಪುರಕ್ಕೆ ಹೋಗುತ್ತಿದ್ದ ರಾಜನಿಗೆ ಕಣ್ಣೆದಿರಿನ ತೆರೆಯನ್ನು ಹರಿದು ಹಾಕಿದ ಹಾಗಾಯಿತು, ಅವನು ಅವರಿಗೆಲ್ಲ ದೇಶ ಬಹಿಷ್ಕರಣ ಶಿಕ್ಷೆಯನ್ನು ವಿಧಿಸಿದನು. ಅವರೊಂದಿಗೆ ಹೊರಟು ಹೋಗಲು ನೋಡಿದ ಪ್ರವೀಣನನ್ನು ರಾಜನು ಸ್ವತಃ ಎದ್ದು ಹೋಗಿ ಹಿಂದಕ್ಕೆ ಕರೆದು, "ಕ್ಷಮಿಸಪ್ಪ. ನನಗೆ ಬುದ್ಧಿ ಬರಿಸಿದ ನೀನು ನಿಜವಾದ ಪಂಡಿತನೇ ನಿಜ. ನಿನ್ನನ್ನು ದಂಡಿಸಿ ನಾನು ಪಾಪಿಯಾದೆ. ಇಂದಿನಿಂದ ನೀನು ನನ್ನ ಅಂತರಂಗಿಕ ಮಂತ್ರಿಯಾಗಿರಬೇಕು. ನಮ್ಮ ದೇಶದ ಪರಿಪಾಲನೆ ಒಳ್ಳೆಯದಾಗುವಂತೆ ನೀನೇ ನೋಡಬೇಕು" ಎಂದನು. ಇದಕ್ಕೆ ಪ್ರವೀಣನು ಅಂಗೀಕರಿಸಿದ.

ಬೇತಾಳವು ಹೀಗೆ ಕಥೆಯನ್ನು ಮುಗಿಸಿ, "ರಾಜಾ, ಪಿಶಾಚಿಯಾಗಿ ಜೀವಿಸುವ ಅವಕಾಶವಿಲ್ಲದೆ ಹೋದರೂ ಸಾಯಲಿಕ್ಕೇ ನಿಶ್ಚಯಿಸಿದ ಪ್ರವೀಣನು ಪಿಶಾಚಿಗಳ ಸಹಾಯದಿಂದ ಮತ್ತೆ ಮನುಷ್ಯನಾಗಿರಲು ಬಯಸಿದನೇಕೆ? ಅವನ ಪಾಂಡಿತ್ಯಕ್ಕೂ ಅವನ ಪ್ರವರ್ತನೆಗೂ ಏನು ಸಂಬಂಧ? ಅವನು ಪದವಿಗಾಗಿ ಪಾಂಡಿತ್ಯವನ್ನು ಬಿಟ್ಟುಕೊಟ್ಟನೇನು? ಈ ಪ್ರಶ್ನೆಗಳಿಗೆ ತಕ್ಕ ಸಮಾಧಾನ ತಿಳಿದೂ ಕೂಡಾ ಹೇಳದೆ ಹೋದರೆ ನಿನ್ನ ತಲೆಯೊಡೆದು ಹೋಳಾಗಿ ಹೋಗುತ್ತದೆ" ಎಂದು ಹೇಳಿತು.

ಅದಕ್ಕೆ ತ್ರಿವಿಕ್ರಮನೆಂದ: "ಪ್ರವೀಣನು ಪಂಡಿತನೆಂಬುದಕ್ಕೆ ಸಂದೇಹವೇ ಬೇಡ. ಅವನ ಪಾಂಡಿತ್ಯಕ್ಕೂ ಪ್ರವರ್ತನೆಗೂ ಗಾಢವಾದ ಸಂಬಂಧವೂ ಇದೆ. ನಿಜವಾದ ಪಾಂಡಿತ್ಯವುಳ್ಳ ಪ್ರವೀಣನು ಪಾಂಡಿತ್ಯವನ್ನು ಮಾರಿಕೊಳ್ಳುವ ಉದ್ದೇಶದವನಲ್ಲ. ಅದು ಪ್ರಜೆಗಳ ಒಳಿತಿಗಾಗಿ ಬೆಳಗಬೇಕೆಂಬ ಅಭಿಪ್ರಾಯ ಅವನದಾಗಿತ್ತು. ಅದಕ್ಕೆ ಸಾಧ್ಯವಿಲ್ಲವೆಂತಲೇ ಆತ್ಮಹತ್ಯೆ ಮಾಡಿಕೊಳ್ಳಲು ಪ್ರಯತ್ನಿಸಿದ. ದುಷ್ಟವಾದ ಅರಾಜಕತೆಯನ್ನು ತೊಲಗಿಸುವಂತಹ ಶಕ್ತಿಯನ್ನು ಪಾಂಡಿತ್ಯವು ಅವನಿಗೆ ಕೊಟ್ಟಿರಲಿಲ್ಲ. ಅದಕ್ಕೆ ಪಿಶಾಚಿಗಳ ಸಹಾಯ ಸಿಗುವುದೆಂದು ತೋರಿದ ಕೂಡಲೇ ಅವನು ಅವುಗಳ ಸಹಾಯದಿಂದ ಅರಾಜಕತೆಗೆ ಕಾರಣರಾದ ನರಪಿಶಾಚಿಗಳನ್ನು ಬಯಲಿಗೆಳೆದು ಅವವರನ್ನು ದಂಡಿಸುವ ಕಾರ್ಯಕ್ಕೆ ತೊಡಗಿದ. ಅವನು ರಾಜನ ಕೋರಿಕೆಗೆ ಒಪ್ಪಿದುದು ಕೂಡಾ ತನ್ನ ಪಾಂಡಿತ್ಯವು ಪ್ರಜೆಗಳ ನಡುವೆ ಬೆಳಗುವ ಪರಿಸ್ಥಿತಿ ಬರಿಸಿಕೊಳ್ಳಲಿಕ್ಕಾಗಿಯೇ. ಪ್ರವೀಣನು ಒಂದು ಕ್ಷಣ ಕೂಡಾ ತನ್ನ ಪಾಂಡಿತ್ಯ ಬಿಟ್ಟವನಲ್ಲ."

ಹೀಗೆ ರಾಜನಿಗೆ ಮೌನಭಂಗವಾದ ಕೂಡಲೇ ಬೇತಾಳವು ಶವದೊಂದಿಗೆ ಮಾಯವಾಗಿ ಹೋಗಿ ಮತ್ತೆ ಮರದ ಕೊಂಬೆಗೆ ತಗಲಿ ನೇತಾಡತೊಡಗಿತು.

—(ಬಿ. ನಾಗೇಶ್ವರರಾವ್)



# ಬುದ್ಧಿ ಶಕ್ತಿ

ಒಬ್ಬ ರಾಜನಿಗೆ ಇಬ್ಬರು ಹೆಂಡತಿಯರು. ಅವರಿಬ್ಬರಿಗೂ ಹುಟ್ಟಿದ ಇಬ್ಬರು ಕುಮಾರರೂ ಇದ್ದರು. ದೊಡ್ಡ ರಾಣಿಯ ಮಗ ಬುದ್ಧಿವಂತ. ಎರಡನೇಯವಳ ಮಗ ತುಸು ಮಂದಮತಿ. ನ್ಯಾಯವಾಗಿ ಯುವರಾಜನಾಗಿ ಅಭಿಷೇಕ ಪಡೆಯಬೇಕಾದವನು ದೊಡ್ಡವನೇ. ಆದರೆ ಚಿಕ್ಕ ರಾಣಿ ತನ್ನ ಮಗನೇ ಯುವರಾಜನಾಗಬೇಕೆಂದು ಹಟ ಹಿಡಿದಳು.

ರಾಜನು ಇಬ್ಬರು ಕುಮಾರರಿಗೂ ಒಂದು ಪರೀಕ್ಷೆ ಇಟ್ಟು, ಅದರಲ್ಲಿ ಗೆದ್ದವನನ್ನು ಯುವರಾಜನನ್ನಾಗಿ ಮಾಡುವೆನೆಂದು ಚಿಕ್ಕ ರಾಣಿಯನ್ನು ಒಪ್ಪಿಸಿ, ತುಂಬಿದ ಸಭೆಯಲ್ಲಿ ಇಬ್ಬರು ಕುಮಾರರನ್ನು ನೋಡಿ ಹೀಗೆ ಕೇಳಿದನು: "ದೇಶದಲ್ಲಿ ಆನೆಗಳು ಎತ್ತುಗಳಾದರೆ, ಎತ್ತುಗಳು ಹಸುಗಳಾದರೆ, ಹಸುಗಳು ನಾಯಿಗಳಾದರೆ, ನಾಯಿಗಳು ಬೆಕ್ಕುಗಳಾದರೆ, ಬೆಕ್ಕುಗಳು ಇಲಿಗಳಾದರೆ, ಉಂಟಾಗುವ ಪರಿಸ್ಥಿತಿಯನ್ನು ಹೇಗೆ ಸರಿಪಡಿಸುವಿರಿ?"

ಕೂಡಲೇ ಚಿಕ್ಕ ಮಗನು, "ಮಂತ್ರವಾದಿಯಿಂದ ಮಂತ್ರ ಹಾಕಿಸಿ ಸರಿಪಡಿಸುತ್ತೇನೆ" ಎಂದ.

ದೊಡ್ಡ ಮಗ ಸ್ವಲ್ಪ ಆಲೋಚನೆ ಮಾಡಿ "ದೇಶದ ಕಣಜಗಳು ತುಂಬಿರುವಂತೆ ನೋಡುತ್ತೇನೆ. ಅದಕ್ಕಾಗಿ ನದಿಗಳ ನೀರು ವೃಥಾ ಹೋಗದಂತೆ ಮಾಡುತ್ತೇನೆ. ಕೆರೆ ಬಾವಿಗಳ ಕೆಸರು ತೆಗೆಯುತ್ತೇನೆ. ಜಲಸಮೃದ್ಧಿಗೆ ಬೇಕಾದ್ದೆಲ್ಲಾ ಮಾಡಿಸುತ್ತೇನೆ" ಎಂದ.

"ಆ ಪ್ರಶ್ನೆಗೆ ಇದೆಂತಹ ಉತ್ತರ?" ಎಂದು ಕೆಲವರು ಕೇಳಲು ರಾಜನೆಂದ:

"ಹೌದು. ಕ್ಷಾಮ ಪರಿಸ್ಥಿತಿ ಬಂದರೇನೇ ಹಾಗಾಗುತ್ತದೆ. ಇವನು ಹೇಳಿದ ಉತ್ತರವೇ ಸರಿಯಾದುದು. ಇನ್ನು ಇವನೇ ಯುವರಾಜ!"

—ಉಮಾ ಕಲ್ಯಾಣಿ





# ವಾದಪಾಂಡಿತ್ಯ

ಒಂದು ಊರಿನಲ್ಲಿ ಹರಿಶಂಕರನೆಂಬ ಒಬ್ಬ ವಿದ್ವಾಂಸನಿದ್ದ. ಸುತ್ತುಮುತ್ತಲಿನ ಪ್ರಾಂತಗಳಲ್ಲಿ ಅವನಷ್ಟು ದೊಡ್ಡ ವಿದ್ವಾಂಸನು ಬೇರೆ ಯಾರೂ ಇರಲಿಲ್ಲವೆಂದು ಎಲ್ಲರಿಂದಲೂ ಅನ್ನಿಸಿಕೊಂಡ, ಯಾರಿಗೆ ಏನು ಸಂದೇಹ ಬಂದರೂ ಅವನ ಹತ್ತಿರ ಬಂದು ಸಂದೇಹ ತೀರಿಸಿಕೊಂಡು ಹೋಗುತ್ತಿದ್ದರು. ಅವನಿಗೆ ಎಲ್ಲಾ ದೇಶಗಳ ಪಂಡಿತರನ್ನೂ ಗೆದ್ದು ವಿಜಯಪತ್ರ ಸಂಪಾದಿಸಬೇಕೆಂದು ತೋರಿತು.

ಅದಕ್ಕಾಗಿ ಹೊರಟ ಅವನು ಅನೇಕ ದೇಶಗಳನ್ನು ತಿರುಗುತ್ತಾ, ಅಲ್ಲಲ್ಲಿಯ ಆಸ್ಥಾನದ ವಿದ್ವಾಂಸರೊಡನೆ ವಾದಮಾಡಿ ಗೆದ್ದು ವಿಜಯಪತ್ರ ಪಡೆಯುತ್ತಾ ಕಾಲಕ್ರಮದಲ್ಲಿ ಕಾಶೀನಗರವನ್ನು ತಲಪಿದ.

ಕಾಶೀರಾಜನ ಆಸ್ಥಾನದಲ್ಲಿ ದೊಡ್ಡ ದೊಡ್ಡ ವಿದ್ವಾಂಸರಿದ್ದರು. ಕಾಶೀರಾಜನು ಹರಿಶಂಕರನ ಕೋರಿಕೆಯನ್ನು ತಿಳಿದುಕೊಂಡು, ತನ್ನ ಆಸ್ಥಾನದ ವಿದ್ವಾಂಸರೊಂದಿಗೆ ಅವನು ವಾದಮಾಡಲು ಅನುಮತಿ ಕೊಟ್ಟನು.

ಕಾಶೀರಾಜನ ಆಸ್ಥಾನದಲ್ಲಿ ನಲುವತ್ತೊಂಬತ್ತು ಮಂದಿ ವಿದ್ವಾಂಸರಿದ್ದರು. ಅವರಿಗೆ ಹಿರಿಯನಾಗಿ ಗಜಕೇಸರಿ ಉಪಾಧ್ಯಾಯರೆಂಬ ಮಹಾಪಂಡಿತರಿದ್ದರು. ಅವರು ವಾದಕ್ಕೆ ಸಿದ್ಧನಾದ ಹರಿಶಂಕರನನ್ನು ಕುರಿತು, "ಮಹಾರಾಜರು ವಾದಕ್ಕೆ ಅನುಮತಿ ನೀಡಿದ್ದು ನಿಜ. ನಮ್ಮ ಪಾಂಡಿತ್ಯ ಜ್ಞಾನದಲ್ಲಿ ಒಂದು ನಿಯಮವಿದೆ, ಮರ್ಯಾದೆಯಿದೆ. ಪಾಂಡಿತ್ಯವನ್ನು ವಾದಕ್ಕೂ, ಜಯಾಪಜಯಗಳಿಗೂ ಗುರಿಮಾಡುವ ಆಚಾರವು ನಮಗಿಲ್ಲ. ಮಹಾಮಹಾ ಪುರಾಣಗಳನ್ನೂ ಇತಿಹಾಸಗಳನ್ನೂ ರಚಿಸಿದ ಮಹಾತ್ಮರು ಯಾರೊಂದಿಗೂ ವಾದಮಾಡಿ ಗೆದ್ದ ವಿದ್ವಾಂಸರಲ್ಲ. ಯಾರನ್ನೂ ಸೋಲಿಸಿದವರಲ್ಲ. ಒಬ್ಬ ವಿದ್ವಾಂಸನನ್ನು ಮತ್ತೊಬ್ಬ ವಿದ್ವಾಂಸನು ಸೋಲಿಸುವುದೆಂದರೆ ಆ ವಿದ್ವಾಂಸನನ್ನು ಅವಮಾನಿಸಿದಂತೆ ನೋಯಿಸಿದಂತೆ ಆಗುತ್ತದೆ. ಇದು ವಿದ್ಯೆಗೆ ಮಾಡಿದ ಅಪಚಾರವೆಂದು ನಾವು ತಿಳಿಯುವವರು. ಎಷ್ಟೇ ದೊಡ್ಡ ವಿದ್ವಾಂಸನಾದರೂ ಅವನಿಗಿಂತ ದೊಡ್ಡ ವಿದ್ವಾಂಸನಿರುವನೆಂದು ನಾವು ನಂಬುತ್ತೇವೆ. ಏಕೆಂದರೆ ವಿದ್ವತ್ತಿಗೆ ಪರಿಮಿತಿ ಎಂಬುದೇನಿಲ್ಲವಷ್ಟೆ? ಅದರಲ್ಲಿರುವ ಹೆಚ್ಚು ಕಡಿಮೆಗಳು ಸಂದರ್ಭವಶಾತ್ ತನ್ನಂತೆ ತಿಳಿಯುತ್ತವೆ. ವಾದನೆಯಿಂದ ಅವುಗಳನ್ನು ತಿಳಿಯು

"ಸುನಂದ"

ಬೇಕಾದ ಅಗತ್ಯ ನಮಗಿಲ್ಲ. ನಿಮಗೂ ಯಾವ ಕೊರತೆಯೂ ಇಲ್ಲ" ಎಂದು ಹೇಳಿಬಿಟ್ಟರು.

ತನ್ನನ್ನು ನೋಡಿ. ತನ್ನ ಪ್ರತಿಭೆಯನ್ನು ಕುರಿತು ಕೇಳಿ ಗಜಕೇಸರಿ ಹೆದರಿ ಹೀಗೆ ನೀತಿ ಹೇಳುವನೆಂದು ಕೊಂಡು ಹರಿಶಂಕರನು, "ಮುಖ್ಯವಾಗಿ ಕೈಲಾಗದ ಅಶಕ್ತ ಪಂಡಿತರು ಹೀಗೆ ಹೇಳುತ್ತಾರೆ. ವಾದಕ್ಕೆ ನಿಲ್ಲಲು ತಕ್ಕ ಬಂಡವಾಳವಿಲ್ಲದಿದ್ದರೆ ನಾನು ಈ ಕಾಶೀ ನಗರದ ಆಸ್ಥಾನ ವಿದ್ವಾಂಸರನ್ನು ಗೆದ್ದ ಹಾಗೆ ವಿಜಯಪತ್ರವನ್ನು ಕೊಟ್ಟುಬಿಡಿ" ಎಂದನು.

ಗಜಕೇಸರಿ ಪಂಡಿತರು ಯೋಚಿಸುತ್ತಿದ್ದಾಗ, ಚಿಕ್ಕವನಾದ ಯುವಕ ಪಂಡಿತನೊಬ್ಬ ಮುಂದೆ ಬಂದು, "ಇವರನ್ನು ಸಂತೋಷಪಡಿಸಲು ನಾನು ವಾದಿಸುತ್ತೇನೆ. ನಾನಿನ್ನೂ ವಿದ್ಯಾರ್ಥಿ ದಶೆಯಲ್ಲಿ ರುವವನಾದುದರಿಂದ ಸೋಲುವುದರಿಂದ ನನಗೆ ಬರುವ ಅವಮಾನವೇನಿಲ್ಲ. ಅವರು ಗೆದ್ದರೆ ನನ್ನಿಂದ ವಿಜಯ ಪತ್ರ ಪಡೆದುಕೊಂಡು ಹೋಗುತ್ತಾರೆ. ಮೊದಲು ಅವರು ನನ್ನನ್ನು ಯಾವುದಾದರೂ ಮೂರು ಪ್ರಶ್ನೆ ಕೇಳಲಿ. ತರುವಾಯ ನಾನು ಅವರಿಗೆ ಮೂರು ಪ್ರಶ್ನೆ ಕೇಳುತ್ತೇನೆ" ಎಂದನು.

ರಾಜನು ಇದಕ್ಕೆ ಒಪ್ಪಿದ ಮೇಲೆ, "ಈ ಪ್ರಪಂಚ ಕ್ಕಿಂತಲೂ ದೊಡ್ಡದು ಯಾವುದು ?" ಎಂದು ಹರಿ ಶಂಕರನು ಪ್ರಶ್ನೆ ಮಾಡಿದ. ಯುವಕ ಪಂಡಿತನು, "ನೋಡಿರಿ, ಆಕಾಶವೇ" ಎಂದ.

ತನ್ನ ಪ್ರಶ್ನೆಗೆ ಸರಿಯಾದ ಉತ್ತರ ವೇದಾಂತದಲ್ಲಿ ಪರಬ್ರಹ್ಮವೆಂದೂ, ಪ್ರಾಪಂಚಿಕ ಅರ್ಥದಲ್ಲಿ ಆಶೆ ಯೆಂದೂ ಹರಿಶಂಕರನ ಅಭಿಪ್ರಾಯವಾಗಿದ್ದರೂ ಯುವಕ ಪಂಡಿತನ ಉತ್ತರವನ್ನು ಅಲ್ಲಗಳೆಯಲು ಸಾಧ್ಯವಿಲ್ಲದೆ, ತನ್ನ ಎರಡನೇ ಪ್ರಶ್ನೆ ಕೇಳಿದ: "ಮನುಷ್ಯನು ದೊಡ್ಡವನಾಗಬೇಕಾದರೆ ಏನು ಮಾಡಬೇಕು ?"

"ಮನಸ್ಸಿನಲ್ಲಿ ಹಾಗಂದುಕೊಂಡು ಮಾತಿನ ಮೂಲಕ ಹೇಳಬೇಕು" ಎಂದ ಯುವಕ ಪಂಡಿತ. ಇದನ್ನು ಕೂಡಾ ತಪ್ಪೆಂದು ಹೇಳುವ ಬಗೆ ಕಾಣದೆ ಹರಿಶಂಕರನು "ಓಹೋ" ಎಂದು ತಲೆಯಾಡಿಸಿ



ತನ್ನ ಮೂರನೇ ಪ್ರಶ್ನೆ ಕೇಳಿದನು. "ಎಲ್ಲವನ್ನೂ ತಿಳಿದುಕೊಳ್ಳಬೇಕಾದರೆ ಏನುಮಾಡಬೇಕು?"

"ನೋಡುವ ಕಣ್ಣೂ ಸೂರ್ಯನ ಪ್ರಕಾಶವೂ ಚೆನ್ನಾಗಿದ್ದರೆ ಎಲ್ಲವೂ ಸ್ಪಷ್ಟವಾಗಿ ತಿಳಿಯುತ್ತವೆ" ಎಂದ ಯುವಕ ಪಂಡಿತ.

ಈ ಉತ್ತರವನ್ನೂ ಅಲ್ಲವೆಂದು ಖಂಡಿಸಲು ಹರಿಶಂಕರನಿಗಾಗಲಿಲ್ಲ. "ನೀನು ಬಹುಳ ಹಗುರಾದ ಉತ್ತರಗಳನ್ನೇ ಹೇಳಿದೆ. ಇವುಗಳಲ್ಲಿ ನಿನ್ನ ಪಾಂಡಿತ್ಯ ಪ್ರತಿಭೆಯೇನೂ ಇಲ್ಲ" ಎಂದನು.

"ಅದು ನಿಜ. ನಾನು ಚಿಕ್ಕವನಾದುದರಿಂದ ನನ್ನ ಬುದ್ಧಿಗೆ ತೋರಿದ ಪ್ರತ್ಯುತ್ತರ ಹೇಳಿದೆ. ಅವುಗಳು ತಪ್ಪಾದರೆ ಖಂಡಿಸಿರಿ" ಎಂದ ಯುವಕ ಪಂಡಿತ.

"ಸರಿಯೇ ಹೇಳಿದಿಬಿಡು. ಇನ್ನು ನಿನ್ನ ಪ್ರಶ್ನೆಗಳನ್ನು ಕೇಳು" ಎಂದು ಹರಿಶಂಕರನು ಹೇಳಲು, "ಕೇಳಿರಿ. ಮೊದಲನೇ ಪ್ರಶ್ನೆ ನೀವು ಎಲ್ಲಿಂದ ಬಂದಿರಿ?" ಎಂದು ಕೇಳಿದ.

ಏನು ಉತ್ತರ ಕೊಡಬೇಕೆಂದು ಹರಿಶಂಕರನಿಗೆ ತೋರಲಿಲ್ಲ. ತಾತ್ವಿಕವಾಗಿ ಆ ಪ್ರಶ್ನೆಗೆ "ಗೊತ್ತಿಲ್ಲ"ವೆಂದು ಉತ್ತರ ಕೊಡಬೇಕಾಗುತ್ತೆ. ಆದರೆ ತಾನು ಯಾವ ಊರಿನಿಂದ ಬಂದೆನೆಂಬುದು ಅವನಿಗೆ ಗೊತ್ತೇ ಇರುವುದರಿಂದ ಆ ಮಾತು ಹೇಳಿ ಉಪಯೋಗವಿಲ್ಲ. ಆದುದರಿಂದ ಹರಿಶಂಕರನು "ಈ ಪ್ರಶ್ನೆಗೆ ನೀನೇ ಉತ್ತರ ಹೇಳು ನೋಡೋಣ" ಎಂದ.

"ಎಲ್ಲರೂ ಈ ಲೋಕಕ್ಕೆ ಎಲ್ಲಿಂದ ಬರುವರೋ ಅಲ್ಲಿಂದಲೇ ನೀವೂ ಬಂದಿರಿ. ಆಯಿತಷ್ಟೆ? ಇನ್ನು ಎರಡನೇ ಪ್ರಶ್ನೆ, ನೀವು ಎಲ್ಲಿಗೆ ಹೋಗುವಿರಿ?" ಎಂದ ಯುವಕ ಪಂಡಿತ.

ಇದಕ್ಕೆ ಕೂಡಾ ತಾತ್ವಿಕವಾಗಿ "ಗೊತ್ತಿಲ್ಲ"ವೆಂಬುದೇ ಉತ್ತರ. "ನೀನೇ ಹೇಳುವಂತೆ ಎಲ್ಲರೂ ಹೋಗುವಲ್ಲಿಗೇ ಎಂದರೆ ತೀರಿತಷ್ಟೆ?" ಎಂದ ಹರಿಶಂಕರ ಸಂದೇಹದಿಂದ.

"ಅದು ಸರಿಯಲ್ಲ. ನೀವು ದಿಗ್ವಿಜಯ ಮಾಡುವ ಆಲೋಚನೆ ಬಿಟ್ಟು ಇಲ್ಲಿಂದ ಸೀದಾ ನಿಮ್ಮ ಊರಿಗೆ ಹೋಗುವಿರೆಂಬುದೇ ಸರಿಯಾದ ಉತ್ತರ. ಇನ್ನು ನಾನು ಕೇಳುವ ಮೂರನೇ ಪ್ರಶ್ನೆ ಏನೆಂದರೆ, ನೀವು ಇಲ್ಲಿಂದ ಏನನ್ನು ತೆಗೆದುಕೊಂಡು ಹೋಗುವಿರಿ?" ಎಂದು ಕೇಳಿದ ಯುವಕ ಪಂಡಿತ.

"ಈ ಪ್ರಶ್ನೆಗೆ ಸರಿಯಾದ ಉತ್ತರ ಹೇಳುತ್ತೇನಪ್ಪ. ನಾನು ಇಲ್ಲಿಗೆ ಅಹಂಕಾರವನ್ನು ಹಿಡಿದುಕೊಂಡು ಬಂದವನು. ಆ ಭಾರವನ್ನು ಇಲ್ಲಿ ಬಿಟ್ಟು ವಿವೇಕವನ್ನು ತೆಗೆದುಕೊಂಡು ಹೋಗುತ್ತೇನೆ" ಎಂದು ಹೇಳಿ ಹರಿಶಂಕರನು ಯುವಕ ಪಂಡಿತನನ್ನು ಮೆಚ್ಚಿ ಆಲಿಂಗಿಸಿಕೊಂಡನು. ಆಗ ಅವನ ಕಣ್ಣುಗಳಿಂದ ನೀರು ತುಂಬಿ ಸೂಸಿತು.



ಜಿತೇಂದ್ರನು ಅವನನ್ನು ಹಿಡಿದು ಬಯ್ದು ಹೊಡೆಯಲು ತೊಡಗಿದನು. ಒಂದುಸಾರಿ ತಂದೆ ರಾಮನನ್ನು ಹಿಡಿದು ವಿಪರೀತವಾಗಿ ಹೊಡೆದುದರಿಂದ, ಅವನು ಮನೆಬಿಟ್ಟು ಓಡಿಹೋದನು.

ಕೋಪದಿಂದ ಹೊಡೆದರೂ ತಂದೆ ತಾಯಿಗಳಿಗೆ ರಾಮನ ಮೇಲೆ ಅಮಿತವಾಗಿ ಪ್ರೀತಿಯಿತ್ತು. ಅವನು ಹೊರಟುಹೋದ ಮೇಲೆ ಅವರಿಬ್ಬರೂ ಪಶ್ಚಾತ್ತಾಪಪಡುತ್ತ ಕೊರಗತೊಡಗಿ ಅದೇ ವ್ಯಸನದಿಂದ ಹಾಸಿಗೆ ಹಿಡಿದರು. ಆಮೇಲೆ ಒಬ್ಬರ ಹಿಂದೊಬ್ಬರಾಗಿ ತೀರಿಯೂ ಹೋದರು. ಅಂದಿನಿಂದ ಜಿತೇಂದ್ರನ ಎರಡನೇ ಮಗನಾದ ಚಂದ್ರನು ಬೀದಿಗೆ ಬಿದ್ದನು.

ಆದರೆ ಚಂದ್ರನು ಗಟ್ಟಿ ಗುಂಡಿಗೆಯುಳ್ಳವನು. ಅಂತೆಯೇ ಹತಾಶನಾಗದೆ ಧೈರ್ಯವನ್ನು ಬಿಡದೆ ಊರೂರು ತಿರುಗುತ್ತ, ಬೀದಿಗಳಲ್ಲಿ, ಮೈದಾನಗಳಲ್ಲಿ ಗಾರುಡೀ ವಿದ್ಯೆಗಳನ್ನು ಪ್ರದರ್ಶಿಸುತ್ತ, ಮೆಚ್ಚಿದವರು ಕೊಟ್ಟ ಚಿಲ್ಲರೆ ದುಡ್ಡುಗಳಿಂದ ಕಾಲ ಕಳೆಯುತ್ತಿದ್ದನು.

ಒಂದುದಿನ ಚಂದ್ರನು ಒಂದು ಬೀದಿಯಲ್ಲಿ ತನ್ನ ಗಾರುಡೀ ವಿದ್ಯೆಗಳನ್ನು ಪ್ರದರ್ಶಿಸಿಕೊಂಡಿದ್ದನು. ಅದನ್ನು ನೋಡಲು ಕೂಡಿದ ಗುಂಪು ಅಷ್ಟೂ ಹುಡುಗ ಮಕ್ಕಳದೇ ಆಗಿತ್ತು. ಈ ಹುಡುಗ ಹುಪ್ಪಡಿಗಳಿಂದ ಚಿಲ್ಲರೆ ಕಾಸು ಕೂಡಾ ಬರಲಾರದೆಂದು ಗೊತ್ತಿದ್ದರೂ ಚಂದ್ರನು ತನ್ನ ಇಂದ್ರಜಾಲದಿಂದ ಅವರನ್ನು ಸಂತೋಷಗೊಳಿಸುತ್ತಲೇ ಇದ್ದನು.

ಆ ಸಮಯದಲ್ಲಿ ಪಕ್ಕದಲ್ಲಿದ್ದ ಒಂದು ಮನೆಯೊಳಗಿನಿಂದ ಒಬ್ಬ ಹುಡುಗನ ಅಳುವಧ್ವನಿ ಕೇಳಿ ಬರತೊಡಗಿತು. ಚಂದ್ರನು ತನ್ನ ಗಾರುಡೀ ಆಟವನ್ನು ನಿಲ್ಲಿಸಿ ಆ ಮನೆಗೆ ಹೋಗಿ ನೋಡಿದನು. ಆ ಮನೆಯವಳು ತನ್ನ ನಾಲ್ಕು ವಯಸ್ಸಿನ ಮಗನನ್ನು ಏತಕ್ಕೋ ಬೈಯುತ್ತ ಹೊಡೆಯುತ್ತಿದ್ದಳು.

ಏನಾಯಿತೆಂದು ವಿಚಾರಿಸಿದಾಗ ಈ ಸಂಗತಿ ತಿಳಿಯಿತು. ಆ ಹುಡುಗನ ತಂದೆಗೆ ಕಸತ್ ಕಾಯಿಲೆ



ಬಂದುದಕ್ಕೆ ಅವಳು ದೇವರಿಗೆ ಮರೆಹೊಕ್ಕು ಹರಕೆ ಹೇಳಿಕೊಂಡಳಂತೆ. ಅವಳು ತಾನು ಹೇಳಿಕೊಂಡ ಹರಕೆಯಂತೆ, ಒಂದುವಾರದವರೆಗೆ ಮಧ್ಯಾಹ್ನದ ತನಕ ಬಾಯಿಗೆ ನೀರು ಕೂಡಾ ಹಾಕದೆ ಉಪವಾಸವಿದ್ದು ದೇವರ ದರ್ಶನ ಮಾಡಿಕೊಂಡು ಬಂದು ಊಟ ಮಾಡುತ್ತಿದ್ದಳು. ಹೀಗೆ ಶ್ರದ್ಧೆಯಿಂದ ನಿಯಮ ತಪ್ಪದೆ ಮಾಡುತ್ತಾ ಬಂದುದರಿಂದ ದೇವರ ಅನುಗ್ರಹವಾಗಿ ಅವಳ ಗಂಡನ ರೋಗ ವಾಸಿಯಾಯಿತು. ಒಂದುವಾರದವರೆಗೆ ದಿನಾ ಅವಳೊಂದಿಗೆ ಆ ಹುಡುಗನೂ ಉಪವಾಸವಿರಬೇಕಾಗಿ ಬಂದಿತ್ತು. ಈ ದಿನ ಮಧ್ಯಾಹ್ನದವರೆಗೆ ಅವನನ್ನು ತಡೆ ಹಿಡಿಯುವುದು ಯಾಕೋ ಕಷ್ಟವಾಗಿದೆ. "ಹಸಿವೆಯಮ್ಮಾ!" ಎಂದು ಒಂದೇಸಮನೆ ಅಳುತ್ತಿದ್ದಾನೆ. ಒಳ್ಳೆಯದರಲ್ಲಿ ಹೇಳಿ ಸಮಾಧಾನ ಪಡಿಸಿದರೂ ರಂಪ ಮಾಡುತ್ತಿದ್ದಾನೆ. ಅದಕ್ಕೇ ಅವಳು ಅವನಿಗೆ ದಂಡನೆ ಕೊಡುತ್ತಿದ್ದಾಳೆ.



ಚಿಕ್ಕ ಹುಡುಗನನ್ನು ಹಸಿವೆಯಿಂದ ಕಷ್ಟಪಡಿಸುವುದು ಮಾತ್ರವಲ್ಲದೆ ಅವನನ್ನು ಹೀಗೆ ಹೊಡೆಯುವುದು ತೀರ ಅನ್ಯಾಯವೆಂದು ಚಂದ್ರನಿಗೆ ತೋರಿತು. ಅಂತೆಯೇ ಅವನು ಅವಳೊಂದಿಗೆ ವಿನಯವಾಗಿ, "ಅಮ್ಮಾ, ಚಿಕ್ಕ ಮಕ್ಕಳಲ್ಲಿಯೇ ದೇವರಿರುವರೆಂದು ಹೇಳುತ್ತಾರಷ್ಟೆ? ಈ ಪುಟ್ಟ ಹುಡುಗನಲ್ಲಿ ದೇವರನ್ನು ಕಾಣಲಾರದ ನೀವು ಇನ್ನು ಯಾವ ದೇವರನ್ನು ನೋಡಲು ಹೋಗುವಿರೋ ನನಗಂತೂ ಅರ್ಥವಾಗುವುದಿಲ್ಲ" ಎಂದನು.

ಅವಳು ಎಗತಾಳಿಯಿಂದ ಅವನನ್ನು ನೋಡಿ, "ಹೌದು ಹೌದು. ಅದಕ್ಕೇ ನಿನ್ನ ಬದುಕು ಹೀಗೆ ಬೀದಿಗೆ ಬಿದ್ದಿದೆ. ನೀನು ಹೇಳುವಂತೆ ಇವನಲ್ಲಿ ನಿಜವಾಗಿಯೂ ನಿನಗೆ ದೇವರು ಕಾಣುವನಾದರೆ ಇವನನ್ನು ಸ್ವಲ್ಪ ನೋಡಿಕೊಂಡಿರು. ನಾನು ದೇವರ ದರ್ಶನ ಮಾಡಿಕೊಂಡು ಬಂದು, ನಿನಗೆ ಕೂಡಾ ಭೋಜನ ಹಾಕುತ್ತೇನೆ" ಎಂದಳು.

ಚಂದ್ರನು "ಸರಿಯಮ್ಮಾ" ಎಂದು ಆ ಹುಡುಗನನ್ನು ಎತ್ತಿಕೊಂಡ. ಆ ಹುಡುಗನಿಗೆ ನಯವಾದ ಮಾತುಗಳನ್ನು ಹೇಳಿ ಮಂಗಾಡಿಸುತ್ತ, ಚಿಕ್ಕ ಚಿಕ್ಕ ಗಾರುಡೀ ಆಟ ತೋರಿಸಿ ಅವನನ್ನು ನಗಿಸಲಿಕ್ಕೂ ತೊಡಗಿದ. ಅವಳು ಹಿಂದಿರುಗಿ ಬರುವಾಗ, ಕೇಕೇ ಹಾಕಿ ಆಡುತ್ತಿದ್ದ ಮಗನನ್ನು ನೋಡಿ, ಚಂದ್ರನನ್ನು ಮೆಚ್ಚಿ ಅವನಿಗೆ ಊಟ ಹಾಕಿದಳು.

ಊಟವಾದ ಮೇಲೆ ಚಂದ್ರನು ಆ ಹುಡುಗನ ತಾಯಿಯೊಂದಿಗೆ, "ಅಮ್ಮಾ, ನಾನೊಂದು ಮಾತು ಕೇಳಬೇಕೆಂದಿದ್ದೇನೆ. ನೀವು ಮಗನಿಗಿಂತಲೂ ಹೆಚ್ಚೆಂದು ನಮಸ್ಕಾರ ಮಾಡಲು ಹೋಗುವ ಆ ದೇವರು ಎಲ್ಲಿದ್ದಾನೆ? ನನಗೂ ನೋಡಬೇಕೆಂದು ಆಸೆಯಾಗಿದೆ" ಎಂದನು.

ಅವಳು ನಕ್ಕು, "ಆ ದೇವರೆಂದರೆ ಸಾಧಾರಣವಾಗಿ ದೇವಸ್ಥಾನದೊಳಗಿರುವ ಮೂಕದೇವರು ಅಂದುಕೊಂಡೆಯಾ? ಅಲ್ಲಪ್ಪಾ, ಆತ ಪ್ರತ್ಯಕ್ಷ ದೈವ. ನೋಡಿದವರೊಂದಿಗೆ ಮಾತಾಡುತ್ತಾನೆ. ಪ್ರಶ್ನೆ ಕೇಳಿದರೆ ತಕ್ಕ ಉತ್ತರ ಕೊಡುತ್ತಾನೆ. ತಣ್ಣಗಿನ ಕಣ್ಣುಗಳಿಂದ ನೋಡಿ ನಮ್ಮ ನೋವುಗಳನ್ನೆಲ್ಲಾ ಹೋಗಲಾಡಿಸಿ ಬಿಡುತ್ತಾನೆ" ಎಂದಳು ಭಕ್ತಿಯಿಂದ ನಮಸ್ಕಾರ ಮಾಡುತ್ತ.

ಆ ಮಾತು ಕೇಳಿ ಚಂದ್ರನ ಕುತೂಹಲ ಇನ್ನಷ್ಟು ಹೆಚ್ಚಿತು. ಅವನು ಅವಳು ಹೇಳಿದ ಸ್ಥಳಕ್ಕೆ ಹೋದನು. ಅಲ್ಲಿ ಮಿಜಿಮಿಜಿ ಜನರು ಕೂಡಿಕೊಂಡಿದ್ದರು. ಅಷ್ಟೂ ಜನರು ಶಾಂತವಾಗಿ, ಮೌನವಾಗಿ ಕುಳಿತುಕೊಂಡಿದ್ದರು. ಒಂದು ಎತ್ತರವಾದ ವೇದಿಕೆಯ ಆಸನದಲ್ಲಿ ಉದ್ದುದ್ದವಾದ ಗಡ್ಡ ಮೀಸೆಗಳಿಂದೊಪ್ಪುವ ಸಾಧುವೊಬ್ಬನು ಕುಳಿತುಕೊಂಡಿದ್ದ. ಅವನು ಜನರಗುಂಪನ್ನು ನೋಡಿ ಏನೋ ಒಳ್ಳೆಯ ಮಾತುಗಳನ್ನು ಹೇಳಿಕೊಂಡಿದ್ದನು. ಎಲ್ಲರೂ ಕಿವಿಗೊಟ್ಟು ತಲೆಯಾಡಿಸುತ್ತ ಅವನ ಉಪದೇಶಗಳನ್ನು

ಕೇಳುತ್ತಿದ್ದರು. ನಿಮಗೆ ಕಷ್ಟನಷ್ಟಗಳಿದ್ದರೆ ತನ್ನಬಳಿಗೆ ಬನ್ನಿರೆಂದೂ, ನಿಮ್ಮೆಲ್ಲರ ಕಷ್ಟಗಳನ್ನು ತೊಲಗಿಸ ಬೇಕೆಂತಲೇ ತಾನು ಅವತಾರವೆತ್ತಿರುವೆನೆಂದೂ ಹೇಳಿದನು. ಮಾತಿನ ಮಧ್ಯದಲ್ಲಿ ಅವನು ಗಾಳಿಯಲ್ಲಿ ಕೈಯಾಡಿಸಿ ವಿಭೂತಿಯನ್ನು ಸೃಷ್ಟಿಸಿ ಅದನ್ನು ಜನರ ಮೇಲೆ ಎಸೆಯುವಾಗ, ಜನರೆಲ್ಲ ಕೈಜೋಡಿಸಿ ಕಣ್ಣು ಮುಚ್ಚಿ ತಲೆಯೊಡ್ಡುತ್ತಿದ್ದರು. ಆಗಾಗ ಕುಳಿತಲ್ಲಿಂದ ಅಷ್ಟೆತ್ತರ ಮೇಲಕ್ಕೆದ್ದು ಕೆಲವು ಕ್ಷಣ ಗಾಳಿಯಲ್ಲಿ ತೇಲಿ ಕುಳಿತುಕೊಳ್ಳುತ್ತಿದ್ದನು. ಹೀಗೆಯೇ ಅವನು ಇನ್ನೂ ಬೇರೆಬೇರೆ ಮಹಿಮೆಗಳನ್ನು ಪ್ರದರ್ಶಿಸು ತ್ತಿದ್ದಾಗಲೆಲ್ಲ ಜನರು "ಹಾ ಭಗವನ್ ! ಭಕ್ತಾಧೀನ ಗುರುದೇವಾ !" ಎಂದು ಘೋಷಿಸುತ್ತಿದ್ದರು.



ಚಂದ್ರನಿಗೆ ಇದೆಲ್ಲಾ ಏನೋ ವಿಚಿತ್ರವಾಗಿ ತೋರಿತು. ಆ ಸಾಧು ಪ್ರದರ್ಶನ ಮಾಡಿದ ವಿದ್ಯೆ ಗಳೆಲ್ಲ ಅವನಿಗೂ ಗೊತ್ತಿದ್ದುವು. ಆದರೆ ತಾನು ಮಾಮೂಲು ಗಾರುಡೀಗಾರನಾಗಿ ಹೀನ ಸ್ಥಿತಿ ಯಲ್ಲಿರುವುದನ್ನು ನೆನೆದುಕೊಂಡನು. ಈ ಸಾಧು ಹೇಗೆ ದೇವರಾಗಿ ಹೋದನೋ ? ಈ ರಹಸ್ಯವನ್ನು ತಿಳಿದುಕೊಳ್ಳಬೇಕೆಂದು ಚಂದ್ರನು ಆ ದಿನವೆಲ್ಲಾ ಕಾದುಕೊಂಡಿದ್ದು, ಅರ್ಧರಾತ್ರಿಯ ಹೊತ್ತಿನಲ್ಲಿ ಆ ಮಹಾಸಾಧುವನ್ನು ಏಕಾಂತದಲ್ಲಿ ಸಂಧಿಸಿದನು. "ಯಾರಪ್ಪಾ ನೀನು ? ಈ ಸಮಯದಲ್ಲಿ ನನ್ನನ್ನು ನೋಡಲು ಬಂದೆಯೇಕೆ ?" ಎಂದು ಕೇಳಿದ ಸಾಧು.

"ನಾನೊಬ್ಬ ಐಂದ್ರಜಾಲಿಕ. ನೀವು ಮಾಡಿದ ಅದ್ಭುತಗಳನ್ನೆಲ್ಲಾ ನೋಡಿದೆ. ಅವುಗಳನ್ನು ನೋಡಿದ ಜನರು ಮಹಿಮೆಯೆಂದು ಕೊಂಡಾಡುತಿದ್ದಾರೆ. ಅದೇ ಪ್ರದರ್ಶನಗಳನ್ನು ನಾನು ಕೂಡಾ ತೋರಿ ಸುತ್ತಿದ್ದರೆ, ಹುರಿಗಡಲೆಕೊಳ್ಳಲು ದುಡ್ಡು ಸಿಕ್ಕುವು ಕಷ್ಟವಾಗುತ್ತದೆ. ಎಲ್ಲರೂ ನಿಮ್ಮನ್ನು ಪ್ರತ್ಯಕ್ಷದೇವ ರೆಂದು ಹೇಳುತ್ತಾರೆ. ಈ ರಹಸ್ಯವನ್ನು ತಿಳಿದುಕೊಳ್ಳ ಬೇಕೆಂತಲೇ ಬಂದೆ" ಎಂದ ಚಂದ್ರ. ಅವನು ಆ ದಿನದ ತನ್ನ ಅನುಭವಗಳನ್ನು ಕೂಡಾ ಸಾಧುವಿಗೆ ತಿಳಿಸಿದನು. "ಇದರಲ್ಲಿ ರಹಸ್ಯ ಗುಹಸ್ಯ ಏನಿಲ್ಲಪ್ಪ. ನಾನು ದೇವರ ಅವತಾರ ಪುರುಷ. ನನಗೆ ಸಹಜ ವಾಗಿಯೇ ಇರುವ ಆ ಶಕ್ತಿಗಳನ್ನು ನೀನು ಕಷ್ಟಪಟ್ಟು ವಿದ್ಯೆಯ ರೂಪದಲ್ಲಿ ಕಲಿತಿರಬಹುದು. ನಿನಗೆ ಪರಿಕರಗಳು ಅವಶ್ಯವಾಗುತ್ತವೆ. ನನಗೆ ಅದಾವುದೂ ಬೇಡ." ಎಂದ ಸಾಧು.

"ಹಾಗೇನು ? ಹಾಗಾದರೆ ನಾನು ನನ್ನ ಬೆರ ಳನ್ನು ಕೊಯ್ದುಕೊಳ್ಳುತ್ತೇನೆ. ಅದನ್ನು ನೀವು ಮತ್ತೆ ಅಂಟಿಸಿ ಸರಿಮಾಡಬಲ್ಲಿರಾ ?" ಎಂದು ಚಂದ್ರನು ಕೇಳಿದ.

ಹಾಗೆಯೇ ಮಾಡುತ್ತೇನೆ ಎಂದ ಸಾಧು. ಕೂಡಲೇ ಚಂದ್ರನು ತನ್ನ ಬೆರಳನ್ನು ಚಿಕ್ಕ ಚೂರಿ ಯಿಂದ ಕೊಯ್ದುಬಿಟ್ಟನು. ಕೆಂಪಗಾಗಿ ರಕ್ತವು ಹರಿಯಿತು. ಕೂಡಲೇ ಸಾಧು ಕಡಿದ ಬೆರಳನ್ನು ಯಥಾ ಸ್ಥಾನದಲ್ಲಿಟ್ಟು ಏನೋ ಮಂತ್ರವನ್ನು

ಉಚ್ಚರಿಸಿ ಕೈಗಳನ್ನು ಅತ್ತಿತ್ತ ಆಡಿಸಿದ. ರಕ್ತವು ಮಾಯವಾಗಿ ಬೆರಳು ಯಥಾಪ್ರಕಾರ ಸರಿ ಆಯಿತು.

"ಇದು ಆಶ್ಚರ್ಯ! ಅಸಂಭವ! ಈ ವಿದ್ಯೆ ನನ್ನ ಕುಟುಂಬದವರಿಗೆ ಹೊರತು ಬೇರೆ ಯಾರಿಗೂ ತಿಳಿಯದು." ಎಂದು ಚಂದ್ರನು ಗೊಣಗಿದ. ಅದನ್ನು ಕೇಳಿ ಸಾಧು ಬೆಚ್ಚಿಬಿದ್ದವನಂತೆ," ನಿನ್ನ ಹೆಸರು ಚಂದ್ರ ತಾನೆ ? " ಎಂದ.

"ಹೌದು. ಅದು ನಿಮಗೆ ಹೇಗೆ ಗೊತ್ತಾಯಿತು ? " ಎಂದು ಚಂದ್ರನೂ ಆಶ್ಚರ್ಯದಿಂದ ಕೇಳಿದ. ಸಾಧು ನಗುತ್ತ "ನಾನು ದೇವರ ಅವತಾರ ಪುರುಷನೆಂದ ಮೇಲೆ ಗೊತ್ತಾಗದಿರುತ್ತದೆಯೇ ? ನಾನು ನಿನ್ನ ಅಣ್ಣ ರಾಮನಪ್ಪಾ! ಅಪ್ಪನ ಪೆಟ್ಟು ತಿಂದು ಮನೆ ಬಿಟ್ಟು ಓಡಿಹೋದ ರಾಮನು ನಾನೇ" ಎಂದು ಚಂದ್ರನನ್ನು ಆಪ್ಯಾಯವಾಗಿ ನೋಡಿದ.

ಬೆರಗಾದ ಚಂದ್ರನ ಬಾಯಿಯಿಂದ ಮಾತೇ ಬರಲಿಲ್ಲ. ಸಾಧು ರಾಮ ತಮ್ಮನ ಬೆನ್ನು ತಟ್ಟಿ ಹೀಗೆ ಹೇಳಿದ: "ಚಂದ್ರಾ, ನಿನ್ನ ಪ್ರಶ್ನೆಗೆ ಸರಿಯಾದ ಸಮಾಧಾನ ಈಗ ಹೇಳುತ್ತೇನೆ. ಈ ಪ್ರಪಂಚವೆಂಬುದು ಎಲ್ಲಾ ಮಾಯೆಯೇ. ನೀನು ಒಬ್ಬ ಹುಡುಗನಲ್ಲಿ ನಿನ್ನ ಇಂದ್ರಜಾಲ ವಿದ್ಯೆಯಿಂದ ಹಸಿವೆಯ ನೆನಪನ್ನು ಮರೆಯಿಸಬಹುದು. ಆಗ ಆ ಹುಡುಗ ನಿನ್ನಲ್ಲಿ ದೇವರನ್ನು ನೋಡುತ್ತಾನೆಂದು ತಿಳಿ. ಆದರೆ ದೊಡ್ಡವರ ವಿಷಯದಲ್ಲಿ ಹಾಗಾಗಲಾರದು. ನಾನು ದೇವರೆಂದು ಸ್ಪಷ್ಟವಾಗಿ ಹೇಳಿ ಇಂದ್ರಜಾಲ ಮಾಡಿ ದೇವರಾದೆ. ನೀನು ಗಾರುಡಿಗಾರನೆಂದು ಹೇಳಿ ಇಂದ್ರಜಾಲ ಮಾಡುತ್ತ ಕೇವಲ ಗಾರುಡೀ ವಿದ್ಯೆಯವನಾಗಿಯೇ ಉಳಿದಿರುವೆ. ಜನರು ನಿನ್ನ ಇಂದ್ರಜಾಲವನ್ನೂ ನನ್ನ ಇಂದ್ರಜಾಲವನ್ನೂ ಯಾವ ಅನುಮಾನವೂ ಇಲ್ಲದೆಯೇ ನೋಡುತ್ತಾರೆ. ಪ್ರಪಂಚದಲ್ಲಿ ಹಾಯಾಗಿ ಬದುಕಬೇಕಾದರೆ ವಿದ್ಯೆಮಾತ್ರ ಇದ್ದರೆ ಸಾಲದು. ಮಾತುಗಳನ್ನೂ ಹೇಳಿ ಮೋಸಮಾಡಲು ಕಲಿತರೇನೇ ನಿನ್ನ ವಿದ್ಯೆಗೆ ಬೆಳಕು ಬರುತ್ತದೆ. ಅದನ್ನೇ ನಾನು ಮಾಡುತ್ತಿದ್ದೇನೆ. ದೇವರೆಂದು ಸುಳ್ಳು ಹೇಳಿಕೊಂಡಿರುವುದೇ ನನ್ನ ಬದುಕಿನ ದಾರಿ. ಜನರೆಲ್ಲ ಮೂರ್ಖರಾಗಿರುವವರೆಗೂ ನನಗೆ ಯಾವ ಬಗೆಯ ಕೊರತೆಯೂ ಇಲ್ಲ. ನಿನ್ನ ಸಂದೇಹ ತೀರಿತಷ್ಟೆ ? ಇನ್ನು ಹೋಗಿ ಬಾ."

ಚಂದ್ರನು ಹೊರಟುಹೋದ. ಆ ಮೇಲೆ ಚಂದ್ರನು ಏನಾದನೆಂಬುದು ಯಾರಿಗೂ ಗೊತ್ತಿಲ್ಲ. ಆದರೆ ವಿದರ್ಭದೇಶದ ಮೂಡು ಬದಿಯ ಒಂದು ಕುಗ್ರಾಮದಲ್ಲಿ ದೇವರ ಅವತಾರವಾಗಿದೆಯೆಂದೂ, ಅವನು ಎಷ್ಟೋ ಮಹಿಮೆಗಳನ್ನು ಪ್ರದರ್ಶಿಸುವನೆಂದೂ ಜನರು ತಂಡೋಪತಂಡವಾಗಿ ಹೋಗುತ್ತಿದ್ದರು. ಆ ಕುಗ್ರಾಮವೂ ಅಭಿವೃದ್ಧಿಗೇರುತಿತ್ತು.



# ರಹಸ್ಯ ಮಾರ್ಗ

ಒಬ್ಬ ರಾಜನಿಗೆ ಇಬ್ಬರು ಮಗಂದಿರು. ಹಿರಿಯವನು ಧೈರ್ಯಶಾಲಿ. ಎರಡನೆಯವನು ಅಂಜುಕುಳಿಯಾಗಿ ಮೊಂಡುಗಾರನಾಗಿದ್ದ. ಒಂದುದಿನ ಎರಡನೆಯವನು ತಂದೆಯೊಂದಿಗೆ, "ಅಪ್ಪಾ, ದೊಡ್ಡ ದೊಡ್ಡ ರಾಜಭವನಗಳಲ್ಲಿ ರಹಸ್ಯ ಮಾರ್ಗಗಳಿವೆಯಂತಲ್ಲಾ? ನಮ್ಮ ಭವನದಲ್ಲಿ ಕೂಡಾ ಇವೆಯೇನು?" ಎಂದು ಕೇಳಿದ. "ಇವೆ" ಎಂದು ತಂದೆ ಹೇಳಲು "ಅವುಗಳನ್ನು ತೋರಿಸಿರಿ ಅಪ್ಪಾ, ನೋಡುತ್ತೇನೆ" ಎಂದ ಮಗ.

"ಅವು ರಹಸ್ಯ ಮಾರ್ಗವಾದುದರಿಂದ ನನಗೂ ಮುಖ್ಯ ಮಂತ್ರಿಗೂ ಹೊರತು ಬೇರೆ ಯಾರಿಗೂ ತಿಳಿಯಬಾರದು. ಕಾಲ ಬಂದಾಗ ನೋಡುವಿಯಂತೆ. ಈಗಲೇ ಅದನ್ನು ನೋಡಬೇಕಾದ ಅಗತ್ಯವೇನು ಬಂತು?" ಎಂದು ತಂದೆ ಕೇಳಿದ.

"ಶತ್ರುಗಳು ನಮ್ಮ ಮೇಲೆ ಬಂದರು ಅಂದುಕೊಳ್ಳಿ. ನಾನು ಯಾರ ಸಹಾಯವೂ ಇಲ್ಲದೆ ತಪ್ಪಿಸಿಕೊಂಡು ಹೋಗಬಹುದಷ್ಟೆ?" ಎಂದ ಆ ಮಗ.

ರಾಜನು ಕೂಡಲೇ ಆ ಮಗನನ್ನು ಕರೆದುಕೊಂಡು ಹೋಗಿ ಒಂದು ಬಾಗಿಲನ್ನು ತೆರೆದು ಅಲ್ಲಿರುವ ಮೆಟ್ಟಿಲುಗಳನ್ನು ತೋರಿಸಿದನು. ಮಗನು ಆ ಮೆಟ್ಟಿಲಿಳಿದು ನೋಡಲು ಹೋಗುವಾಗ ರಾಜನು ಬಾಗಿಲು ಹಾಗೆ ತಾಳ ಜಡಿದನು.

ಸ್ವಲ್ಪ ಹೊತ್ತಿನ ಮೇಲೆ ರಾಜನ ಆ ಮಗ ಬಾಗಿಲು ತಟ್ಟಿದ. ಆಗ ರಾಜನು ಬಾಗಿಲು ತೆರೆಯದೆ, "ನಿನ್ನಂತಹ ಹೇಡಿ ಮಗ ಈ ಭವನದಲ್ಲಿರಕೂಡದು. ಆ ಮಾರ್ಗದಲ್ಲೇ ಹೋದರೆ ನೆರೆರಾಜ್ಯವನ್ನು ಸೇರುವೆ. ಅಲ್ಲೇ ಬದುಕಿಕೊಂಡಿರು. ಇನ್ನು ಮೇಲೆ ನಿನ್ನ ಮುಖ ನನಗೆ ತೋರಿಸಬೇಡ!" ಎಂದನು.





# ರಾಜನ ತೀರ್ಥಯಾತ್ರೆ

ಕೆಲವು ಶತಮಾನಗಳ ಹಿಂದೆ ಆಳಿದ ಅಂಗದೇಶದ ಒಬ್ಬ ರಾಜನು ತುಂಬ ಧನವಂತನಾಗಿದ್ದ. ನ್ಯಾಯ ಪರಿಪಾಲನೆಗೂ ದಯಾಪರತೆಗೂ ಅವನಷ್ಟು ಪ್ರಸಿದ್ಧ ರಾದವರು ಬೇರೆ ಯಾರೂ ಆಗ ಇರಲಿಲ್ಲ. ಒಂದು ಸಾರಿ ಅವನ ರಾಜ್ಯದಲ್ಲಿ ಮಶೂಚಿಕಾ ವ್ಯಾಧಿಯ ಕಾಟ ವಿಪರೀತವಾಯಿತು. ಅದು ಹಾಗೆ ಸುತ್ತಿ ಹೀಗೆ ಸುತ್ತಿ ಕಡೆಗೆ ಆ ರಾಜನ ರಾಣಿಯನ್ನೂ ಏಕ ಮಾತ್ರ ಪುತ್ರನನ್ನೂ ಬಿಡದೆ ಬಲಿ ತೆಗೆದುಕೊಂಡಿತು. ಹೃದಯ ವಿದಾರಕವಾದ ಈ ದುಃಖವನ್ನು ತಾಳ ಲಾರದೆ ರಾಜನು ವಿರಕ್ತಭಾವತಾಳಿ ದಿನ ಹೋದಂತೆ ಕುಂದಿಹೋದನು.

ರಾಜ್ಯಪಾಲನೆಯಲ್ಲಿ ಮನಸ್ಸಿಲ್ಲದವನಾಗಿ ಗಾಢ ಚಿಂತೆಯಲ್ಲಿ ಸುಮ್ಮನೆ ಕುಳಿತ ರಾಜನನ್ನು ನೋಡಿ ಮಂತ್ರಿಗಳೂ, ರಾಜಗುರುಗಳೂ ಅವನಿಗೆ ಎಷ್ಟೋ ಬಗೆಯಿಂದ ಹಿತಬೋಧೆ ಮಾಡಿದರು.

ಕಡೆಗೆ ತೀರ್ಥಯಾತ್ರೆ ಮಾಡುವುದರಿಂದ ಈ ದುಃಖವು ನೀಗಿ ಮನಸ್ಸಿಗೆ ಶಾಂತಿಯುಂಟಾಗುತ್ತ ದೆಂದು ಆಲೋಚನೆ ಕೂಡ ಹೇಳಿದರು. ಅಂಗರಾಜ ನಿಗೆ ಈ ಒಂದು ಆಲೋಚನೆ ಮಾತ್ರ ಹಿಡಿಸಿತು. ಅವನು ಯಾತ್ರೆಗೆ ಹೊರಡಲು ನಿಂತಾಗ ಮಂತ್ರಿಗಳು ಅವನಿಗೆ ಪಲ್ಲಕಿ ಪರಿವಾರಗಳ ಏರ್ಪಾಡು ಮಾಡ ತೊಡಗಿದರು. ಹಾಗೆ ಸುಖವಾಗಿ ಪ್ರಯಾಣ ಹೊರಡಲು ಅಂಗರಾಜನು ಒಪ್ಪಲಿಲ್ಲ.

"ನಾನು ಏಕಾಂಗಿಯಾಗಿ ತೀರ್ಥಯಾತ್ರೆ ಮಾಡು ತ್ತೇನೆ. ರಾಜಕೀಯದ ಗೊಡವೆ ಯಾವುದೂ ನನ್ನೊಂದಿಗೆ ಬರಬಾರದು. ರಾಜಕೀಯಕ್ಕೂ ನನಗೂ ಯಾವ ಸಂಬಂಧವೂ ಬೇಡ" ಎಂದ ರಾಜ.

"ನೀವು ಹೀಗೆ ರಾಜತ್ವವನ್ನೆಲ್ಲ ಬಿಟ್ಟು ಹೋಗಿ ಬಿಟ್ಟರೆ ನೀವು ಹಿಂದಿರುಗಿ ಬರುವವರೆಗೆ ರಾಜ್ಯಪಾಲನೆ ಮಾಡುವವರು ಯಾರು ? ಅದನ್ನಾದರೂ ಏರ್ಪಡಿಸ ಬೇಕಷ್ಟೆ ?" ಎಂದು ಮಂತ್ರಿಗಳು ಹೇಳಲು, "ನಾನು ತೀರ್ಥಯಾತ್ರೆಯಿಂದ ನೆಮ್ಮದಿ ಪಡೆದು ತಿರುಗಿ ಬರುವವರೆಗೆ ನನ್ನ ತಮ್ಮ ಸಂಗನು ರಾಜನಾಗಿರಲಿ !" ಎಂದ ಅಂಗ ರಾಜ.

ಈ ಮಾತು ಕೇಳಿ ಎಲ್ಲರ ಮುಖಗಳ ಕಳೆಯೂ ಇಳಿದುಹೋಯಿತು. ಅದಾವುದನ್ನೂ ಅಂಗರಾಜನು ಗಮನಿಸಲಿಲ್ಲ. ಅವನು ಸಂಗರಾಜನನ್ನು ಸಿಂಹಾಸನ ದಲ್ಲಿ ಕೂಡಿಸಿ, ತಾನು ಹಿಂದಿರುಗುವವರೆಗೆ ರಾಜ್ಯ

ಪಿ. ಸಿ. ಸರ್ಕಾರ್, ಐಂದ್ರಜಾಲಿಕರು

ವನ್ನು ಪಾಲಿಸಿಕೊಂಡಿರುವಂತೆ ಹೇಳಿದನು. ಬಳಿಕ ತೀರ್ಥಯಾತ್ರೆಗೆ ತಕ್ಕ ಸಾದಾ ಬಟ್ಟೆಗಳನ್ನು ಧರಿಸಿ, ಕೈಯಲ್ಲೊಂದು ಬಡಿಗೆ ಹಿಡಿದುಕೊಂಡು ಸಾಧಾರಣ ಯಾತ್ರಿಕನಂತೆ ಹೊರಟು ಹೋದನು.

ಸಂಗನು ವಂಚಕ ಬುದ್ಧಿಯವನು; ಕ್ರೂರನು. ಅವನಲ್ಲಿಲ್ಲದ ದುರ್ವ್ಯಸನಗಳೇ ಇಲ್ಲ. ಈಗ ಅಧಿಕಾರ ಬಂದ ಮೇಲೆ ಅಧಿಕಾರ ಮದವೂ ಸೇರಿತು. ರಾಜನ ಆಸ್ಥಾನದ ಉದ್ಯೋಗಸ್ಥರಿಗೂ ಅಧಿಕಾರಿಗಳಿಗೂ ಅವನ ಗುಣ ಗೊತ್ತಿದ್ದರೂ ಉತ್ತಮನಾದ ಅಂಗ ಮಹಾರಾಜನ ಕಟ್ಟಳೆಗೆ ಮಾಕೆತ್ತಲಾರದೆ ದೇವರೇ ಗತಿಯೆಂದು ಸುಮ್ಮನಿದ್ದರು.

ಸಂಗನು ಸಿಂಹಾಸನವೇರಿದ ಮೇಲೆ ಹಳೆಯ ಮಂತ್ರಿಗಳನ್ನೆಲ್ಲಾ ತೊಲಗಿಸಿ ಅವನಿಗೆ ವಿಶ್ವಾಸ ಪಾತ್ರರಾದವರನ್ನು ಆಸ್ಥಾನಕ್ಕೆ ನಿಯಮಿಸಿದನು. ಅನಂತರ ಕ್ರಮವಾಗಿ ಅಂಗರಾಜನ ವಿಶ್ವಾಸದವರನ್ನೂ ಪದವಿಗಳಿಂದ ಹೊರಡಿಸಿ ತನ್ನ ಭೃತ್ಯರನ್ನೇ ಆ ಪದವಿಗಳಲ್ಲಿ ಕೂಡಿಸಿದನು. ಹೀಗಾಗಲು ಪರಿಪಾಲನೆಯಲ್ಲಿ ದುಷ್ಟತನದ ವ್ಯತ್ಯಾಸಗಳು ಬರತೊಡಗಿದುವು. ಪ್ರಜೆಗಳು ತುಂಬ ಕಷ್ಟನಷ್ಟಗಳನ್ನು ಅನುಭವಿಸ ತೊಡಗಿದರು. ಸಂಗನ ಭಟರು ಕೆಲವರು ಕೆಲ ಮಂದಿ ಪೌರರ ಮನೆಗಳಿಗೆ ನುಗ್ಗಿ ಎಲ್ಲೆಲ್ಲಿ ಧನವಿದೆಯೋ ಎಲ್ಲಿ ಸುಂದರ ತರುಣಿಯರಿರುವರೋ ಮುಂತಾದ ಸುದ್ದಿಗಳನ್ನು ಸಂಗನಿಗೆ ತಿಳಿಸುತ್ತಿದ್ದರು. ಆಮೇಲೆ ಸಂಗನ ಅಪ್ಪಣೆಯಂತೆ ಹೋಗಿ ಧನವನ್ನೂ ಸ್ತ್ರೀಯರನ್ನೂ ತಂದು ಸಂಗನ ವಶಕ್ಕೆ ಕೊಟ್ಟು ಬಹುಮಾನ ಪಡೆಯುವರು. ಇಷ್ಟು ಮಾಡುವುದರ ಮೇಲೆ ಸಂಗನು ದೇಶದ ಸಂಪತ್ತನ್ನು ದೇಶಾಂತರಗಳಿಗೆ ಕೂಡ ರವಾನೆ ಮಾಡಿಸಿ, ತಾನೂ ತನ್ನ ಕಡೆಯವರೂ ತಿಂದು ಕುಡಿದು ನಾಟ್ಯವಾಡುವಂತಹ ಸರಕುಗಳನ್ನು ತರಿಸಿಕೊಳ್ಳುತ್ತಿದ್ದನು. ರಾಜನ ಸ್ವೇಚ್ಛಾ ಪ್ರವರ್ತನೆಯಿಂದ ತುಂಬಾ ಅಧಿಕವಾಗಿ ಹೋದ ತೆರಿಗೆಗಳ



ಭಾರವನ್ನು ತಾಳಲಾಗದೆ ದೇಶದಲ್ಲಿರುವ ರೈತರು ಹೊರದೇಶಗಳಿಗೆ ಓಡಿಹೋದರು. ಅಂತೆಯೇ ಶಿಲ್ಪಿ ಕಲಾವಿದರೇ ಮೊದಲಾದವರೂ ಎಲ್ಲಿಗೋ ಪರಾರಿಯಾದರು. ಕೇವಲ ನಿಸ್ಸಹಾಯಕರಾದವರು ಮಾತ್ರ ಏನೂ ತೋರದೆ ತೆಪ್ಪಗಿದ್ದರು. ಕೆಲವರು ಸ್ವದೇಶಾಭಿಮಾನವನ್ನು ಬಿಡದೆ ಏನಾದರೂ ಅಲ್ಲಿಯೇ ಸಾಯಲು ನಿರ್ಧರಿಸಿ ಸುಮ್ಮನಿದ್ದರು. ಕೆಲವರು ಅಂಗರಾಜನು ಹಿಂದಿರುಗಿ ಬಂದು ಒಳ್ಳೆಯಪಾಲನೆ ನಡೆಸುವನೆಂಬ ದೂರದ ಆಶೆಯಿಂದ ಕಾಯುತ್ತಿದ್ದವರು.

ಅಂತೂ ದೇಶದಲ್ಲಿದ್ದರಿಗೆ ಯಾವ ಭದ್ರತೆಯೂ ಮನಃಶಾಂತಿಯೂ ಇಲ್ಲದೆ ಹೋಯಿತು. ಹೊಲಗಳೆಲ್ಲ ಹಾಳುಬಿದ್ದುವು. ಚಿನ್ನವನ್ನು ಕಳುಹಿಸಿ ದೇಶಾಂತರಗಳಿಂದ ಆಹಾರ ತರಿಸಿಕೊಳ್ಳುವ ಪರಿಸ್ಥಿತಿ ಬಂದಿತು. ವಿಲಾಸ ವಸ್ತುಗಳಿಗಾಗಿ ದೇಶದ ಸಂಪತ್ತನ್ನು ರವಾನೆ ಮಾಡಲೇ ಬೇಕಾಗಿತ್ತು. ದೇಶ ಬಡತನಕ್ಕಿಳಿಯಿತು. ಸಂಗನ ಸಲಹಾದಾರರಲ್ಲಿ ಹೆಚ್ಚು ಮಂದಿ ವಿದೇ



ಶೀಯರಿದ್ದರು. ಅವರು ಒಂದೇ ಸವನೆ ಅಪಾರ ಧನವನ್ನು ಗಳಿಸಿಬಿಟ್ಟರು. ಅವರು ಕೊಡುವ ಆಲೋಚನೆಯಂತೆ ಸಂಗನು ಇನ್ನಷ್ಟು ನಿರಂಕುಶತೆಯಿಂದ ರಾಜ್ಯಪಾಲನೆ ಮಾಡತೊಡಗಿದನು. ಇನ್ನಷ್ಟು ಹೆಚ್ಚು ಭೋಗಗಳಲ್ಲಿ ಓಲಾಡತೊಡಗಿದನು. "ನೀವು ಚಕ್ರವರ್ತಿಗಳು. ಸುಖಭೋಗಗಳು ನಿಮಗಿರುವ ಮೂಲ ಹಕ್ಕುಗಳು. ಅದನ್ನು ಪ್ರಶ್ನೆ ಮಾಡಲು ಯಾರಿಗೂ ಅಧಿಕಾರವಿಲ್ಲ!" ಎಂದು ಹೇಳುತ್ತಿದ್ದರು ಅವನ ಮಂತ್ರಿಗಳು.

"ನಾನು ರಾಜಪ್ರತಿನಿಧಿ ಮಾತ್ರ ತಾನೆ! ಅಸಲು ರಾಜ ನನ್ನ ಅಣ್ಣನಲ್ಲವೆ?" ಎಂದು ಒಂದೊಂದು ಸಾರಿ ಅವನಿಗೆ ಶಂಕೆ ಏಳುತ್ತಿತ್ತು.

"ಮಹಾರಾಜರೆ, ನಿಮ್ಮಂಥ ಮೂಢರನ್ನು ನಾವೆಲ್ಲಿಯೂ ಕಂಡಿಲ್ಲ. ಒಂದುಸಾರಿ ಅದೃಷ್ಟವಶಾತ್ ಸಿಂಹಾಸನದಲ್ಲಿ ಕುಳಿತ ಮೇಲೆ ಮಹಾಮಹಾ ಶಕ್ತಿಗಳೆಲ್ಲ ನಿಮ್ಮ ಕಡೆಗೆ ಬರುತ್ತವೆ. ನೀವು ನೆನೆಯುವುದನ್ನೆಲ್ಲಾ ಮಾಡಬಹುದು. ಬೇಕಾದರೆ ನಿಮ್ಮ ಅಣ್ಣ ಅಂಗನಿಗೆ ಕೂಡಾ ನೀವು ಮರಣ ದಂಡನೆ ವಿಧಿಸಬಹುದು. ಅವನು ಈಗ ಒಬ್ಬ ಸಾಮಾನ್ಯ ಪ್ರಜೆಗೆ ಸಮ" ಎಂದರು ಅವನ ಅಂತರಂಗಿಕರಾದ ದುಷ್ಟ ಮಂತ್ರಿಗಳು.

ಈ ಸಲಹೆಗೆ ಸಂಗನು ಕಿವಿ ಮುಚ್ಚಿಕೊಂಡು "ಅಯ್ಯಯ್ಯೋ! ಅಂಥ ಕಾರ್ಯ ನಾನು ಮಾಡಲಾರೆ! ಮಹಾಪಾಪವಲ್ಲವೆ? ನನ್ನಿಂದಾಗದು" ಎಂದ ನಡುಗುವ ಕಂಠದಿಂದ.

"ಅದು ಹೇಡಿಗಳ ಮಾತು! ಚಕ್ರವರ್ತಿಗಳು ಅಂತಹ ದೌರ್ಬಲ್ಯ ತೋರಿಸಬಾರದು. ಆಲೋಚನೆ ಮಾಡಿ. ಅಂಗನು ಹಿಂದಿರುಗಿ ಬಂದುಬಿಟ್ಟರೆ ನಿಮ್ಮ ಈ ಭೋಗಭಾಗ್ಯ ವೈಭವಗಳೆಲ್ಲವೂ ಕಟ್ಟಾಗಿ ಹೋಗುತ್ತವೆ. ಆಮೇಲೆ ನಿಮ್ಮನ್ನು ಕಣ್ಣೆತ್ತಿ ನೋಡುವವರೂ ಇಲ್ಲ. ಅಧಿಕಾರವೂ ಇಲ್ಲ. ಸ್ವೇಚ್ಛೆಯೂ ಇಲ್ಲ. ಇವೆಲ್ಲಕ್ಕಿಂತ ನಿಮ್ಮ ಗೊಡ್ಡು ಸೋದರ ಪ್ರೇಮವೇ ಹೆಚ್ಚಿನದೇನು?" ಎಂದು ಕೇಳಿದರು ಮಂತ್ರಿಗಳು.

ಸಂಗನು ತಲೆಯಾಡಿಸುತ್ತ "ಹೌದು. ನಿಜ. ನಿಮಗೆ ಯಾವುದು ಒಳ್ಳೆಯದೆಂದು ತೋರುತ್ತದೋ ಹಾಗೆಯೇ ಮಾಡಿರಿ. ನಿಮಗೆ ಆ ಅಧಿಕಾರ ಕೊಡುತ್ತೇನೆ" ಎಂದ.

ಅಂಗನನ್ನು ಕಂಡುಹಿಡಿದು ಕೊಲ್ಲಬೇಕೆಂದು ಒಂದು ಅಪ್ಪಣೆ ಹೊರಟಿತು. ಇದೆಲ್ಲ ರಹಸ್ಯವೆಂಬ ಅರ್ಥದಲ್ಲೇ ನಡೆದರೂ, ಮಾಜೀ ಮಹಾಮಂತ್ರಿ ರಘುಪತಿ ಸಾವಿರ ಕಣ್ಣುಗಳಿಂದ ನಡೆಯುವುದನ್ನೆಲ್ಲಾ ಗಮನಿಸಿಕೊಂಡಿದ್ದನು. ಅವನಿಗೆ ಎಲ್ಲವೂ ತಿಳಿದುಹೋಯಿತು. ಅವನು ತನ್ನ ಅಂಚೇ ಹಕ್ಕಿ ಪಾರಿವಾಳದ ಮೂಲಕವಾಗಿ ಅಂಗ ಮಹಾರಾಜನಿಗೆ ಈ ವಾರ್ತೆಯನ್ನು ತಲಪಿಸಿಬಿಟ್ಟನು. ಇದನ್ನು ತಿಳಿದು ತೀರ್ಥಯಾತ್ರೆಯಲ್ಲಿದ್ದ ಅಂಗ ರಾಜನು ಮುಗುಳುನಗೆ ನಕ್ಕನು.

ತೀರ್ಥಯಾತ್ರೆಯಲ್ಲಿ ಬೇರೆ ಬೇರೆ ಪುಣ್ಯ ಕ್ಷೇತ್ರಗಳ ದರ್ಶನ, ಪ್ರಯಾಣಗಳಿಂದ ಅವನ ಮನಸ್ಸಿನ ವ್ಯಥೆ ಕ್ರಮೇಣ ಇಳಿದುಹೋಯಿತು. ತನ್ನ ಕರ್ತವ್ಯ ಸ್ಮರಣೆಯೂ, ಪ್ರಜೆಗಳ ಮೇಲಿನ ಅಕ್ಕರೆಯೂ ಅವನಲ್ಲಿ ಜಾಗ್ರತವಾದುವು. ಜೀವನದ ಮೇಲೆ ಆಸಕ್ತಿಯುಂಟಾಯಿತು. ದೇಶಾಭಿಮಾನವೂ, ಪ್ರಜೆಗಳ ಮೇಲಿನ ಪ್ರೀತಿಯೂ ಬೇಗನೇ ತೀರ್ಥಾಟನೆ ಮುಗಿಸಿ ಹಿಂದಿರುಗಲು ಪ್ರೇರೇಪಿಸಿತು. ಹೀಗೆ ಅವನು ಹಿಂದಿರುಗಬೇಕೆಂದು ನಿಶ್ಚಯಿಸಿದಾಗಲೇ ಪಾರಿವಾಳಗಳ ಅಂಚೆ ತಲಪಿತ್ತು.

ಅದೇ ಪಾರಿವಾಳಗಳ ಮೂಲಕವಾಗಿಯೇ ಅವನು ರಘುಪತಿಯೊಂದಿಗೆ ಉತ್ತರ ಪ್ರತ್ಯುತ್ತರಗಳನ್ನು ನಡೆಯಿಸಿದನು. ಆಗ ಸಂಗನ ದುಶ್ಚರ್ಯೆಗಳೆಲ್ಲವೂ ವಿವರವಾಗಿ ತಿಳಿದುವು.

ಮಳೆಗೆ ನೆನೆದು, ಬಿಸಿಲಿಗೆ ಒಣಗಿ, ಚಳಿಗೆ ನಡುಗಿ ಅಂಗರಾಜನ ಅಂಗಸೌಷ್ಠವ ತುಂಬಾ ಬದಲಾಗಿ ಹೋಗಿತ್ತು. ಯಾರೂ ಅವನನ್ನು ಗುರುತು ಹಿಡಿಯದಂತಾಗಿದ್ದರು. ಒಂದು ವರ್ಷದವರೆಗೆ ಕತ್ತ್ರಿ ಕಾಣದ ಅವನ ಗಡ್ಡ ಮೀಸೆಗಳು ಉದ್ದವಾಗಿ ಬೆಳೆದಿದ್ದುವು. ತಲೆಗೂದಲು ಜಡೆಗಟ್ಟಿ ಹೋಗಿತ್ತು. ಎಡದ ಕಂಕುಳಿನ ಕೆಳಗಿದ್ದ ದೊಡ್ಡದೊಂದು ಕೆಂಪು ಮಚ್ಚೆಯನ್ನು ನೋಡಿದರೆಮಾತ್ರ ತಿಳಿದವರು ಅವನ ಗುರುತು ಹಿಡಿಯಬಹುದಾಗಿತ್ತು.

ಆದುದರಿಂದ ಅವನನ್ನು ಚೆನ್ನಾಗಿಬಲ್ಲ ಅವನ ಕೋಲಗಾರರಿಗೆ ಕೂಡ ಅವನ ಗುರುತು ಹತ್ತಲಿಲ್ಲ. ಯಾವನೋ ಒಬ್ಬ ಬಹುಮಾನ ಪಡೆಯುವ ಉತ್ಸಾಹದಿಂದ ಸ್ಮಶಾನದಲ್ಲಿ ಹೂಳಲ್ಪಟ್ಟ ಯಾವನೋ ಒಬ್ಬನ ತಲೆಯನ್ನು ಕಡಿದುಕೊಂಡು ಹೋಗಿ ಸಂಗನ ದರ್ಬಾರಿನಲ್ಲಿ ತೋರಿಸಿ ಇದೇ ಅಂಗರಾಜನ ತಲೆ ಎಂದು ಸಾಧಿಸಿ ಗೆದ್ದ. ಆ ತಲೆ ಗುರುತಿಸಲಾಗದ ಸ್ಥಿತಿಯಲ್ಲಿದ್ದುದರಿಂದ ಎಲ್ಲರೂ ಅದೇ ಅಂಗರಾಜನ ತಲೆ ಎಂದು ನಂಬಿದರು.

ಸಂಗನು ಕುಡಿದ ಮಯಕದಲ್ಲಿ ಇನ್ನಷ್ಟು ಸಂತೋಷಪಟ್ಟು ಆ ತಲೆಯನ್ನು ತಂದವನಿಗೆ ಭಾರಿ





ಸನ್ಮಾನ ಕೊಟ್ಟ. ಇನ್ನು ಮೇಲೆ ಅವನೇ ರಾಜನೆಂದು ಪಟ್ಟಾಭಿಷೇಕ ಮಾಡಿಸಿಕೊಳ್ಳಲಿಕ್ಕೆ ಯಾವ ಅಡ್ಡಿಯೂ ಇಲ್ಲವೆಂದು ಅವನ ಮಂತ್ರಿ ಹೇಳಿಬಿಟ್ಟ. ನಿರ್ಭೀತನಾದ ಸಂಗನು ಆಗಲಿ ಎಂದು ತಲೆಯಾಡಿಸಿದ. ಆಮೇಲೆ ಸಂಗನ ಪಟ್ಟಾಭಿಷೇಕಕ್ಕೆ ಭಾರೀ ಏರ್ಪಾಡು ಪ್ರಾರಂಭವಾಯಿತು.

ಆ ದೇಶದಲ್ಲಿ ರಾಜ್ಯಾಭಿಷೇಕ ನಡೆಯುವಾಗ ಒಂದು ರಹಸ್ಯ ಕಾರ್ಯಕ್ರಮವನ್ನು ನಡೆಸುವ ಆಚಾರವಿತ್ತು. ಅದರಲ್ಲಿ ಮುಖ್ಯವಾಗಿ ಭಾಗವಹಿಸುವವನು ಐಂದ್ರಜಾಲಿಕ ಕುಟುಂಬದ ಹಿರಿಯ. ಈ ಬಗೆಯ ಐಂದ್ರಜಾಲಿಕ ಕುಟುಂಬವೊಂದು ಪರಂಪರೆಯಾಗಿ ಅಲ್ಲಿತ್ತು. ಇಂದ್ರಜಾಲ ಪ್ರದರ್ಶನ ರಾಜಭವನದ ಅಂತರ್ಮಂಟಪದಲ್ಲಿ ಅಭಿಷೇಕ ಸಿಂಹಾಸನವಿರುವ ಜಾಗದಲ್ಲೇ ನಡೆಯುತ್ತಿತ್ತು. ಆ ಸಿಂಹಾಸನದ ಪಕ್ಕದಲ್ಲಿ ಒಂದು ಧ್ವಜವನ್ನು ನೆಡಲಾಗಿದೆ. ಇಂದ್ರಜಾಲ ಪ್ರದರ್ಶನ ಮುಗಿದ ಕೂಡಲೇ ರಾಜನು ಆರುಮಂದಿ ಪುರಪ್ರಮುಖರ ಸಮಕ್ಷಮದಲ್ಲಿ ಅತಿ ಪ್ರಾಚೀನವಾದ ಪಟ್ಟೆಯ ಪತಾಕೆಯನ್ನೆತ್ತಿ ಆ ಸಿಂಹಾಸನದ ಮೇಲೆ ಕುಳಿತುಕೊಳ್ಳುವನು. ಇದು ರಹಸ್ಯ ಕಾರ್ಯಕ್ರಮ. ಆಮೇಲೆ ವೈಭವದ ಸಮಾರಂಭಗಳೆಲ್ಲ ಸಭಾ ಭವನದಲ್ಲಿ ನಡೆಯುತ್ತವೆ.

ರಹಸ್ಯ ಕಾರ್ಯಕ್ಕೆ ಮುಖ್ಯವಾದ ಪ್ರಾಚೀನ ಪಟ್ಟೆಯ ಪತಾಕೆ ಈಗ ಕಾಣಲಿಲ್ಲ. ತುಂಬ ಹುಡುಕಿಯೂ ಅದು ಸಿಕ್ಕದಿರಲು, ಅಂತಹುದೇ ಇನ್ನೊಂದು ಪತಾಕೆಯನ್ನು ತಯಾರು ಮಾಡಿಸಿದರು. ಐಂದ್ರಜಾಲಿಕರ ಹಿರಿಯ ಸಂಪತ್ ಎಂಬವನು ಎಪ್ಪತ್ತು ವಯಸ್ಸಿನ ಮುದುಕ.

ಈ ವಂಶದವರು ಅಚಲ ರಾಜಭಕ್ತಿಯುಳ್ಳವರು. ಅಷ್ಟೇ ಖಂಡಿತ ಸ್ವಭಾವದವರೂ ಆಗಿದ್ದರು. ಆದುದರಿಂದ ಅವರಿಗೆ ಅಂಗ ಮಹಾರಾಜನ ಮೇಲೆ ಎಷ್ಟೇ ಅಭಿಮಾನವಿದ್ದರೂ, ಮೇಲೆಮಾತ್ರ ಸಂಗನಲ್ಲಿ ಅಭಿಮಾನವುಳ್ಳವರಂತೆ ನಟಿಸುತ್ತ, ಅವನ ವಿಶ್ವಾಸಕ್ಕೆ ಪಾತ್ರರಾಗಿದ್ದರು.

ಸಂಗನ ಪಟ್ಟಾಭಿಷೇಕದ ಮುಂಚಿನದಿನ ಅಂಗರಾಜನು ಯಾತ್ರಿಕನ ವೇಷದಲ್ಲಿ ನಗರದೊಳಗೆ ಪ್ರವೇಶ ಮಾಡಿದನು. ನಗರದೊಳಗಿನ ದೇವಾಲಯಕ್ಕೆ ಪ್ರತಿನಿತ್ಯ ಅನೇಕಮಂದಿ ಯಾತ್ರಿಕರು ಬರುವುದುಂಟು. ಅಂಚೆ ಹಕ್ಕಿಗಳ ಮೂಲಕವಾಗಿ ಮುಂದಾಗಿ ಮಾಡಿಕೊಂಡ ಏರ್ಪಾಡಿನಂತೆ ಅವನು ಆ ರಾತ್ರಿ ಅರಮನೆಯ ನೆರೆಯಲ್ಲಿರುವ ಐಂದ್ರಜಾಲಿಕ ಸಂಪತ್ತಿನ ಮನೆಯಲ್ಲೇ ತಂಗಿದ್ದನು.

ಮೊದಲು ಅಂಗಮಹಾರಾಜನನ್ನು ನೋಡಿದಾಗ ರಘುಪತಿಗೂ ಸಂಪತ್ತಿಗೂ ಅವನ ಗುರುತು ತಿಳಿಯಲಿಲ್ಲ. ಅಂಗಮಹಾರಾಜನು ಹಳೆಯ ಘಟನೆಗಳನ್ನು ಹೇಳಿ, ತನ್ನ ಹುಟ್ಟು ಮಚ್ಚೆಯನ್ನು ತೋರಿಸಿದ ಮೇಲೆ ಅವರು ನಂಬಿ ತುಂಬ ಸಂತೋಷಪಟ್ಟರು. ಮರುದಿನ ಸಂಗನ ಪಟ್ಟಾಭಿಷೇಕದ ರಹಸ್ಯ

ಕಾರ್ಯಕ್ರಮಕ್ಕೆ ಹೊರಡುವಾಗ ಸಂಪತ್ತಿನ ಜತೆಯಲ್ಲಿ ಸಹಾಯಕನಂತೆ ಅಂಗಮಹಾರಾಜನೂ, ಹೊರಡ ಬೇಕು. ಆಗ ರಘುಪತಿಯು ಬಳಿಯಲ್ಲಿರುವ ಅಸಲು ಪ್ರಾಚೀನ ಪಟ್ಟೆಯ ಪತಾಕೆಯನ್ನು ಉಪಾಯವಾಗಿ ಒಳಗೆ ಒಯ್ಯಬೇಕೆಂದು ಮೊದಲೇ ಗೊತ್ತುಮಾಡಿ ಕೊಂಡ ಸಂಗತಿ.

"ಈಗ ನಮ್ಮ ಮಹಾರಾಜರನ್ನು ಯಾರೂ ಗುರುತಿಸಲು ಸಾಧ್ಯವಿಲ್ಲ. ನನ್ನ ಉಪಾಯ ಖಂಡಿತ ಫಲಿಸುತ್ತದೆ. ನೋಡು ರಘುಪತೀ, ನಮ್ಮ ಪಕ್ಷದ ವೀರರು ಸಂಕೇತ ಶಬ್ದ ಕೇಳಿದ ಕೂಡಲೇ ಧಾವಿಸಿ ಬರಲು ಸಿದ್ಧರಾಗಿರುವಂತೆ ತಯಾರುಗೊಳಿಸಿರುವೆ ಯಷ್ಟೇ ? " ಎಂದು ಸಂಪತ್ ಕೇಳಿದ.

" ಬೆಂಕಿ ತಗಲಿದ ಕೂಡಲೇ ಸಿಡಿಯುವ ಫಿರಂಗಿಯ ಹಾಗೆ ಸಿದ್ಧರಾಗಿದ್ದಾರೆ. ಅವರ ಹಿಂದೆ ಪೇರಳ ಪ್ರಜೆಗಳ ಬಲವೂ ಇದೆ. ನೀನು ಈ ಅಸಲು ಪತಾಕೆಯನ್ನು ಹೇಗೆ ಒಳಗೆ ಕೊಂಡೊಯ್ಯುವೆ ? ತುಂಬ ಶೋಧನೆ ನಡೆಯುತ್ತದೆಂಬುದು ನೆನಪಿರಲಿ " ಎಂದ ರಘುಪತಿ.

" ನಾನು ನನ್ನ ಜತೆಯಲ್ಲಿ ಒಬ್ಬ ಸಹಾಯಕನನ್ನು ಕರೆದುಕೊಂಡು ಹೋಗಲು ಅನುಮತಿ ಇದೆ. ಮಹಾರಾಜರನ್ನೇ ನಾನು ಸಹಾಯಕರನ್ನಾಗಿ ಕರೆ ದೊಯ್ಯುತ್ತೇನೆ. ನನಗೂ ಸಹ ಇವರ ಹಾಗೆಯೇ ಉದ್ದವಾದ ಗಡ್ಡ ಮೀಸೆಗಳಿರುವುದರಿಂದ ನಮ್ಮಿಬ್ಬರ ಜೋಡಿ ಉಚಿತವಾಗಿಯೇ ಕಾಣುತ್ತದೆ. ನಮ್ಮೊಂದಿ ಗಿರುವ ಪರಿಕರಗಳನ್ನೆಲ್ಲ ತನಿಖೆ ಮಾಡುವರೆಂಬುದು ಗೊತ್ತಿದೆ. ಆದರೂ ದೇವರ ದಯವಿದ್ದರೆ ಈ ಪ್ರಾಚೀನ ಪತಾಕೆಯನ್ನು ನಾನು ಒಳಕ್ಕೆ ಒಯ್ದು ಬಿಡುತ್ತೇನೆ. ಹೇಗೆಂದರೆ ಈ ಪತಾಕೆಯನ್ನು ಇದ ಕ್ಕಿಂದಲೂ ದೊಡ್ಡದಾದ ಎರಡು ಕಾಗದಗಳ ನಡುವೆ ನಲ್ಲಿಟ್ಟು ಕಾಗದಗಳ ಬದಿಗಳನ್ನು ಅಂಟಿಸಿ ಬಿಡುತ್ತೇನೆ. ಆಗತ್ಯವೆನಿಸಿದರೆ ಪತಾಕೆಯಲ್ಲಿ ಮಡಿಕೆ ಬೀಳದಂತೆ



ಚೆಂದಾಗಿ ಇಸ್ತ್ರಿ ಹಾಕುತ್ತೇನೆಂದುಕೊಳ್ಳಿ. ಉಳಿದ ಇಂದ್ರಜಾಲದ ಪರಿಕರಗಳ ನಡುವೆ ಇದನ್ನು ನೋಡಿದರೆ ಯಾರಿಗೂ ಅನುಮಾನ ಬಾರದು" ಎಂದ್ರ ಐಂದ್ರಜಾಲಿಕ ಸಂಪತ್.

ದೇವರ ದಯದಿಂದ ಎಲ್ಲವೂ ಅಂದುಕೊಂಡ ಹಾಗೆಯೇ ನಡೆಯಿತು. ಕಾಗದಗಳ ಮಧ್ಯದಲ್ಲಿ ಕಾಗದದಂತಿದ್ದ ಪಟ್ಟೆಯ ಪತಾಕೆಯನ್ನು ಯಾರೂ ಕಂಡು ಹಿಡಿಯಲಿಲ್ಲ.

ರಹಸ್ಯ ಸಮಾವೇಶದಲ್ಲಿ ಇಬ್ಬರು ಐಂದ್ರಜಾಲಿ ಕರೂ ಮಾಜೀ ಮಹಾಮಂತ್ರಿ ರಘುಪತಿಯೂ, ಮಾಜೀ ರಕ್ಷಣ ಮಂತ್ರಿ ರಣಧೀರನೂ, ಮತ್ತೆ ನಾಲ್ಕು ಮಂದಿ ಸಂಗನ ಮಂತ್ರಿಗಳೂ ಇದ್ದರು.

ಆಚಾರ ಪ್ರಕಾರ ಎಲ್ಲರೂ ನಿರಾಯುಧರಾಗಿಯೇ ಇದ್ದರು. ಸಿಂಹಾಸನದ ಹಿಂದಿನ ಗೋಡೆಯಲ್ಲಿ ಕತ್ತರಿ ಯಂತೆ ಇಡಲಾಗಿದ್ದ ಎರಡು ಕತ್ತಿಗಳೂ, ಒಂದು ಢಾಲೂ ರಾಜವಂಶದ ಲಾಂಛನ ಮುದ್ರೆಗಳೊಂದಿಗೆ

ಒಪ್ಪಿಸಿದ್ದನು. ಸರಿಯಾದ ವೇಳೆ ಬಂದಿತು. ರಾಜಪುರೋಹಿತನು ಸಂಗನನ್ನು ಮಂತ್ರಪೂರ್ವಕ ಒಳಕ್ಕೆ ಕರೆದುಕೊಂಡು ಬಂದು, ಬಾಗಿಲು ಮುಚ್ಚಿ ತಾಳ ಹಾಕಿದನು. ಆಮೇಲೆ ಅವನು ಮತ್ತೆ ನಾಲ್ಕು ಮಂತ್ರಗಳನ್ನು ಹೇಳಿ ಇಂದ್ರಜಾಲ ಪ್ರಾರಂಭಿಸುವಂತೆ ಸಂಪತ್ತಿಗೆ ಅನುಮತಿ ಕೊಟ್ಟನು.

ಸಂಪತ್ ಪತಾಕೆಯಿರುವ ಕಾಗದವನ್ನು ಎತ್ತಿಕೊಂಡು ಅದನ್ನು ಎರಡು ಬದಿಯೂ ತಿರುಗಿಸಿ ಎಲ್ಲರಿಗೂ ತೋರಿಸಿ ಪೊಟ್ಟಣದಂತೆ ಸುತ್ತಿದನು. ಅವನಿಗೆ ಸಹಾಯಕನಾಗಿದ್ದ ಅಂಗರಾಜನು ಗೋಡೆಯ ಮೇಲಿನಿಂದ ಒಂದು ಕತ್ತಿಯನ್ನು ತೆಗೆದು ಅದರ ಮೊನೆಯನ್ನು ಕಾಗದದ ಪೊಟ್ಟಣದೊಳಗೆ ತುರುಕಿಸಿ ವಿಚಿತ್ರವಾಗಿ ಆಚೆಗೂ ಈಚೆಗೂ ಅಲುಗಿಸಿ ಕತ್ತಿಯನ್ನು ಮೆಲ್ಲನೆ ಹಿಂದಕ್ಕೆಳೆದುಕೊಂಡನು. ಆಗ ಆ ಕತ್ತಿಯ ಮೊನೆಯಲ್ಲಿ ಅಸಲು ಪಟ್ಟೆಯ ಪತಾಕೆ ನೇತಾಡಿಕೊಂಡಿರುವುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು.

ತರುವಾಯ ಐಂದ್ರಜಾಲಿಕನ ಸಹಾಯಕನು ಸಿಂಹಾಸನವನ್ನು ಸಮೀಪಿಸಿ, ಆ ಪತಾಕೆಯನ್ನು ಧ್ವಜಸ್ತಂಭಕ್ಕೆ ಕಟ್ಟಿ ಸಿಂಹಾಸನದ ಮೇಲೆ ಕುಳಿತುಬಿಟ್ಟನು. ಮರುಕ್ಷಣದಲ್ಲಿ ಕತ್ತಿಯ ಮೊನೆಯನ್ನು ಸಂಗನ ಕಡೆಗೆ ಗುರಿಹಿಡಿದು, "ಸಂಗಾ, ನನ್ನ ಕಂಠಸ್ವರದಿಂದ ನಾನು ಯಾರೆಂದು ತಿಳಿಯಿತಷ್ಟೆ? ಕ್ಷೇಮವಾಗಿರಬೇಕೆಂದಿದ್ದರೆ ಈಗಲೇ ಶರಣಾಗಿಬಿಡು. ನಾನು ಬದುಕಿರುವುದರಿಂದ ಇಷ್ಟಕ್ಕೆ ಕ್ಷಮಿಸಿಬಿಡುತ್ತೇನೆ. ಇಲ್ಲದಿದ್ದರೆ ಇಲ್ಲಿಯೇ ನಿನ್ನ ಕಥೆ ಮುಗಿಸಿಬಿಡುತ್ತೇನೆ"

ಸಂಗನು ಅಣ್ಣನ ಕಾಲಿನ ಮೇಲೆ ಬಿದ್ದುಬಿಟ್ಟನು. ಸಂಪತ್ ಗೋಡೆಯ ಮೇಲಿನಿಂದ ಎರಡನೆಯ ಕತ್ತಿಯನ್ನೂ ಸೆಳೆದು, ಪುರೋಹಿತನ ಹರಿವಾಣದಲ್ಲಿದ್ದ ಶಂಖವನ್ನು ಎತ್ತಿಕೊಂಡು ಗಟ್ಟಿಯಾಗಿ ಊದಿದನು. ಹೊರಗೆ ಕಾದಿದ್ದ ಸ್ವಾಮಿಭಕ್ತ ವೀರರಿಗೆ ಅದೇ ಸಂಕೇತ ಶಬ್ದ. ಅಂಗಮಹಾರಾಜನ ಮೇಲೆ ಭಕ್ತಿ ವಿಶ್ವಾಸವಿದ್ದ ರಾಜಭವನ ರಕ್ಷಕರೂ ಆ ವೀರರೊಂದಿಗೆ ಸೇರಿದರು. ವೀರರೆಲ್ಲ ಒಳಗೆ ಬರುವಂತೆ ರಘುಪತಿ ಬಾಗಿಲು ತೆರೆದುಬಿಟ್ಟ.

"ಅಂಗಮಹಾರಾಜರಿಗೆ ಜಯವಾಗಲಿ!" ಎಂಬ ಸಂತೋಷ ನಿನಾದದೊಂದಿಗೆ ಎಲ್ಲರೂ ಅಂಗರಾಜನನ್ನು ಸಭಾ ಭವನಕ್ಕೆ ಕರೆದೊಯ್ದರು. ಒಂದು ಹನಿ ರಕ್ತವೂ ಬೀಳದೆ ಅಂಗಮಹಾರಾಜನು ಸಿಂಹಾಸನವೇರಿ ರಾಜಪಾಲನೆಯನ್ನು ಕೈಕೊಂಡನು. ಸಂಗನೂ ಅವನ ದುಷ್ಟ ಅನುಚರರೂ ಸಂಕಲೆಗಳಿಂದ ಬದ್ಧರಾಗಿ ಕಾವಲು ಭಟರ ನಡುವೆ ಸೆರೆಮನೆಗೆ ಹೋದರು. ಎಲ್ಲರಿಗೂ ವೈಭವ, ಉತ್ಸಾಹ, ಸಂತೋಷ, ಸಡಗರ! ಏನನ್ನುವಿ?" ಎಂದನು.



# ಬುದ್ಧಿವಂತಿಕೆಯ ಪಾಲು

ಒಬ್ಬ ರೈತನಿಗೆ ಇಬ್ಬರು ಮಗಂದಿರು. ದೊಡ್ಡವನು ಚುರುಕು ಬುದ್ಧಿಯವನಾಗಿದ್ದರೆ ಸಣ್ಣವನು ಮಂದ ಬುದ್ಧಿಯುಳ್ಳವ.

ದೊಡ್ಡ ರೈತನು ಸಾಯುವಾಗ ಹಿರಿಯರ ನಡುವೆ ತನ್ನ ಮಗಂದಿರಿಗೆ ಆಸ್ತಿ ಪಡೆಯುವ ಕ್ರಮ ಹೇಳಿದ. ಹಿರಿಯ ಮಗನು ಮೂರುಸಾವಿರ ಗಜ ಸುತ್ತಳತೆಯ ನೆಲವನ್ನು ತಾನು ತೆಗೆದುಕೊಂಡು, ಉಳಿದುದನ್ನು ಚಿಕ್ಕವನಿಗೆ ಕೊಡಬೇಕೆಂದೂ, ಆ ಕೆಲಸ ನ್ಯಾಯಾಧಿಕಾರಿಯ ಎದುರಿನಲ್ಲಿ ನಡೆಯಬೇಕೆಂದೂ ಹೇಳಿ ಸತ್ತ.

ಒಂದುದಿನ ಹಿರಿಯ ಮಗನು ಇರುವ ನೆಲವನ್ನೆಲ್ಲ ಅಳತೆ ಮಾಡುವಾಗ ಇಡಿಯ ನೆಲದ ಸುತ್ತಳತೆ ಮೂರುಸಾವಿರ ಗಜಗಳೇ ಇದ್ದುವು. ಅವನು ತಮ್ಮನೊಂದಿಗೆ "ನೆಲವೆಲ್ಲವೂ ನನ್ನದೇ. ಮೂರು ಸಾವಿರ ಗಜ ಸುತ್ತಳತೆಯಿರುವುದರಿಂದ ತಂದೆ ನನಗೆ ಮಾತ್ರವೇ ನೆಲ ಕೊಟ್ಟಿದಾರೆ. ನಿನಗೇನೂ ಸಿಗದು" ಎಂದನು.

ಚಿಕ್ಕವನು ಗಾಬರಿಯಾಗಿ ನ್ಯಾಯಾಧೀಶನ ಬಳಿಗೆ ಹೋಗಿ ತಂದೆ ಹೇಳಿದುದನ್ನೂ, ಅಣ್ಣ ಹೇಳಿದುದನ್ನೂ ಹೇಳಿದನು.

ನ್ಯಾಯಾಧೀಶನು ಬಂದು ನೆಲದ ಸುತ್ತಳತೆಯನ್ನು ಅಳೆಯಿಸಿ ಮೂರುಸಾವಿರ ಗಜಗಳಿರುವುದನ್ನು ನೋಡಿದನು. ತರುವಾಯ ಅವನು ಆ ನೆಲವನ್ನು ಅಡ್ಡವಾಗಿಯೂ ನೀಟವಾಗಿಯೂ ವಿಭಜಿಸಿ ನಾಲ್ಕು ಭಾಗ ಮಾಡಿ, ಒಂದಕ್ಕೊಂದು ಐದು ಮೂಲೆಗಳಿರುವ ಭಾಗಗಳು ಎರಡನ್ನು ದೊಡ್ಡವನಿಗೆ ಕೊಟ್ಟು, ಉಳಿದೆರಡನ್ನೂ ಚಿಕ್ಕವನಿಗೆ ಕೊಟ್ಟನು. ಈಗ ಇಬ್ಬರ ನೆಲವೂ ಮೂರುಸಾವಿರ ಗಜ ಸುತ್ತಳತೆಯುಳ್ಳುದಾಗಿಯೇ ಇದ್ದಿತು.





# ಕಲ್ಯಾಣಮಹೋತ್ಸವ

ಒಂದು ಊರಿನಲ್ಲಿ ಹಳೆಯಕಾಲದ ಒಂದು ರಾಮ ದೇವಾಲಯವಿದ್ದಿತು. ಗೋವಿಂದಭಟ್ಟನೆಂಬ ಬ್ರಾಹ್ಮಣನು ಆ ದೇವಾಲಯದ ಅರ್ಚಕನಾಗಿದ್ದನು. ಅರ್ಚಕತ್ವಕ್ಕೆ ಬರುವ ಮಾನ್ಯವು ವರ್ಷವಿಡೀ ಅವನ ಸಂಸಾರಕ್ಕೆ ಸಾಲುವಂತಿರಲಿಲ್ಲ. ಊರಿನವರು ದೇವರಿಗೆ ಮಾಡಿಸುವ ಅರ್ಚನೆ, ಹಣ್ಣು ಕಾಯಿ, ದಕ್ಷಿಣೆಗಳಿಂದ ಗೋವಿಂದಭಟ್ಟನ ಸಂಸಾರ ತಕ್ಕ ಮಟ್ಟಿಗೆ ನಡೆಯುತ್ತಿತ್ತು.

ಅಲ್ಲದೆ ಆ ಊರಿನಲ್ಲಿ ಯಾರಾದರೂ ಸತ್ತು ಹೋದರೆ ಮೂರು ದಿನಗಳವರೆಗೆ ಸೂತಕ ತಗಲದಂತೆ ದೇವಾಲಯವನ್ನು ಮುಚ್ಚಿಡುವ ಪದ್ಧತಿಯಿತ್ತು. ಆಗ ಗೋವಿಂದಭಟ್ಟನಿಗೆ ಏನೂ ಸಿಗುತ್ತಿದ್ದಿಲ್ಲ. ಇಂತಹ ಶೂನ್ಯಕಾಲಕ್ಕೆ ಬೇಕಾಗುವಂತೆ ಏನಾದರೂ ಸ್ವಲ್ಪ ಹಣ ಮಿಗಿಲಿಸಿಡುತ್ತಿದ್ದನು.

ಊರಿಗೆ ಸ್ವಲ್ಪ ದೂರದಲ್ಲಿ ಒಂದು ಚಿಕ್ಕ ಪಟ್ಟಣವಿದ್ದಿತು. ಅಲ್ಲಿ ಸಂತೆ ನಡೆಯುವ ದಿನ ಊರಿನವರು ಅಲ್ಲಿಂದ ತಮಗೆ ಬೇಕಾದ ದೇಳೆಕಾಳುಗಳನ್ನು ತಂದು ಕೊಳ್ಳುತ್ತಿದ್ದರು. ಅಂತಹ ಒಂದು ಸಂತೆಯದಿನ ಗೋವಿಂದಭಟ್ಟನು ಸಂತೆಗೆ ಹೋಗಿ ಮನೆಗೆ ಬೇಕಾದ ಸಾಮಾನುಗಳನ್ನು ಕೊಂಡುಕೊಂಡು ಗಾಡಿಯಲ್ಲಿ ಏರಿಸುತ್ತಿದ್ದನು. ಆಗ ಎದುರಿನಲ್ಲಿದ್ದ ಒಂದು ದೊಡ್ಡ ಮನೆಯ ಶ್ರೀಮಂತ ಶೆಟ್ಟಿಯವರು ಅವನನ್ನು ಕರೆದರು. ಗೋವಿಂದಭಟ್ಟನು ಶೆಟ್ಟಿಯವರಬಳಿಗೆ ಹೋಗಿ ವಿಷಯವನ್ನು ತಿಳಿದುಕೊಂಡನು.

ಕಳೆದ ತಿಂಗಳಲ್ಲಿ ಶೆಟ್ಟಿಯವರ ಹೆಂಡತಿಗೆ ತೀವ್ರವಾದ ಕಾಯಿಲೆ ಬಂದಿತ್ತು. ಅವಳ ಕಾಯಿಲೆ ವಾಸಿಯಾದರೆ ರಾಮದೇವರಿಗೆ ಕಲ್ಯಾಣ ಮಹೋತ್ಸವ ನಡೆಸುವೆನೆಂದು ಶೆಟ್ಟಿಯವರು ಹರಕೆ ಹೊತ್ತಿದ್ದರು. ಅವರ ಹೆಂಡತಿಯ ಕಾಯಿಲೆ ಗುಣವಾಗಿತ್ತು.

"ಭಟ್ಟರೇ, ಈ ಹರಕೆ ಸಲ್ಲಿಸಬೇಕೆಂದರೆ ನನಗೆ ಸಮಯವೇ ಸಿಗುವುದಿಲ್ಲ. ಎಷ್ಟೋ ಕೆಲಸಗಳು. ನಾಳೆ ಸಾಯಂಕಾಲ ನಾನು ನನ್ನ ಹೆಂಡತಿಯ ಜತೆಯಲ್ಲಿ ನಿಮ್ಮೂರಿಗೆ ಬರುತ್ತೇನೆ. ನನಗೆ ಅಲ್ಲಿ ಒಂದು ಕೆಲಸವಿದೆ. ಹಾಗೆಯೇ ನಾಡದು ರಾಮದೇವರಿಗೆ ಕಲ್ಯಾಣ ಮಹೋತ್ಸವವನ್ನೂ ನಡೆಯಿಸಿ ಬಡವರಿಗೆ ಅನ್ನದಾನವನ್ನೂ ಮಾಡಿಬಿಡೋಣ. ನಾಳೆ ಬೆಳಿಗ್ಗೆ ಹಣದೊಂದಿಗೆ ಗುಮಾಸ್ತನನ್ನು ಕಳುಹಿಸುತ್ತೇನೆ." ಎಂದರು ಶೆಟ್ಟಿಯವರು.

ಎಂ. ಕೆ. ಈಶ್ವರರಾವ್

ಈ ಸಂಗತಿ ಕೇಳುತ್ತಿದ್ದಂತೆ ಗೋವಿಂದಭಟ್ಟನಿಗೆ ಸಂತೋಷದಿಂದ ಉಸಿರುಕಟ್ಟಿದಂತಾಯಿತು. ಅವನ ಕಾಲದಲ್ಲಿ ಅಷ್ಟು ದೊಡ್ಡ ಕಲ್ಯಾಣ ಮಹೋತ್ಸವ ಮಾಡಿಸಿದವರು ಯಾರೂ ಇರಲಿಲ್ಲ.

"ಅದಕ್ಕೇನು ? ಮಹಾರಾಜರಾಗಿ ಬನ್ನಿ. ಬೇಕಾದ ಏರ್ಪಾಡುಗಳನ್ನೆಲ್ಲಾ ಸಿದ್ಧಗೊಳಿಸಿಡುತ್ತೇನೆ." ಎಂದು ಶೆಟ್ಟಿಯವರೊಂದಿಗೆ ಹೇಳಿ ಗೋವಿಂದಭಟ್ಟನು ಆನಂದದಲ್ಲಿ ತೇಲುತ್ತ ಮನೆಗೆ ಬಂದ.

ಅವನು ಗಾಡಿಯೊಂದಿಗೆ ಮನೆಗೆ ಸೇರುವಾಗ ಕತ್ತಲೆಯಾಗಿತ್ತು. ಸಾಮಾನು ಇಳಿಸಿ ಗಾಡಿಯನ್ನು ಕಳುಹಿಸಿದ ಮೇಲೆ ಮನೆಯ ಜಗಲಿಯಲ್ಲಿ ಯಾರೋ ಮಲಗಿರುವಂತೆ ಮಸಮಸಕಾಗಿ ಕಂಡಿತು.

"ಯಾರಪ್ಪಾ ಅದು ?" ಎಂದು ಗಟ್ಟಿಯಾಗಿ ಕೇಳಿದ ಗೋವಿಂದಭಟ್ಟ. ಮಲಗಿದವನಿಂದ ಯಾವ ಪ್ರತ್ಯುತ್ತರವೂ ಬರಲಿಲ್ಲ. ಅವನ ಶಬ್ದ ಕೇಳಿ ಒಳಗಿನಿಂದ ಅವನ ಹೆಂಡತಿ ಕಾವೇರಮ್ಮ ಹೊರಗೆ ಬಂದು, "ಈ ಹಾಳಾಗಿ ಹೋದವ ಇನ್ನೂ ಇಲ್ಲೇ ಸತ್ತಿದ್ದಾನೆಯೋ ? ನೀವು ಒಳಗೆ ಬನ್ನಿ. ಹೇಳುತ್ತೇನೆ" ಎಂದಳು ಗಂಡನೊಂದಿಗೆ.

ಗೋವಿಂದಭಟ್ಟ ಒಳಗೆ ಬಂದು, "ಯಾರೇ ಅವನು ?" ಎಂದು ಕೇಳಿದನು. "ಯಾವನೋ ಒಬ್ಬ ಮೊಂಡು ಘಟ. ಸಾಯಂಕಾಲದಲ್ಲೇ ಬಂದು ಊಟ ಹಾಕೀ ಅಂತ ಒಂದೇ ರಾಗ ಎಳೆದು ಕೂತಿದ್ದ. ಏನೂ ಇಲ್ಲ, ಹೋಗು ಎಂದರೆ ಹಾಗೇ ಕೂತುಬಿಟ್ಟ. ಕಳ್ಳನ ಹಾಗಿದ್ದಾನೆ. ಅವನನ್ನು ಹೊರಡಿಸಿಬಿಡಿ" ಎಂದಳು ಕಾವೇರಮ್ಮ.

"ಊಟ ಮುಗಿಸಿ ಅವನ ಕಥೆ ನೋಡುತ್ತೇನೆ. ಈದಿನ ಒಳ್ಳೇ ಅದೃಷ್ಟ ಹೊಡೆದ ದಿನ ಗೊತ್ತಾ ?" ಎಂದು ಗೋವಿಂದಭಟ್ಟ ಪಟ್ಟಣದಶೆಟ್ಟಿಯವರ ಹರಕೆಯ ವಿಷಯವನ್ನೆಲ್ಲಾ ಹೆಂಡತಿಯೊಂದಿಗೆ ಹೇಳಿ, ನಡುನಡುವೆ ಸಂಧ್ಯಾವಂದನೆ ಕೂಡಾ ಮುಗಿಸಿ,



"ಏನಿಲ್ಲದಿದ್ದರೂ ಅರ್ಧಭಾಗದಷ್ಟು ಅಂದರೆ ಸುಮಾರು ಐನೂರು ರೂಪಾಯಿ ನಮಗೆ ಉಳಿಸಿ ಕೊಳ್ಳಬಹುದು. ದೊಡ್ಡ ದೊಡ್ಡ ದಕ್ಷಿಣೆಗಳೂ, ಬಟ್ಟೆ, ನಿನಗೆ ಸೀರೆರವಿಕೆ ಕೂಡಾ ಕೊಡದೆ ಹೋಗರು" ಎಂದನು.

ಸಂತೋಷದಿಂದ ಕಾವೇರಮ್ಮ ಗಂಡನಿಗೆ ಬಡಿಸಿದಳು. ಊಟವಾದ ಮೇಲೆ ಮಲಗುವ ಏತ್ಪಾಗಡೆ ನಡೆಸುವಾಗ, ಅವಳು ಕಿಟಕಿಯಲ್ಲಿ ಬಗ್ಗಿ ಜಗಲಿಯನ್ನು ನೋಡಿದಳು. "ಆ ಮೊಂಡ ಇನ್ನೂ ಜಗಲೀಲೇ ಬಿದ್ದುಕೊಂಡಿದ್ದಾನೆ ನೋಡೀ ! ಅವನನ್ನು ಕಳಿಸಿಬಿಡೀ. ಇಲ್ಲದಿದ್ದರೆ ರಾತ್ರಿಯಲ್ಲಿ ಗೋಡೆ ಹಾರಿ ಒಳಗೆ ಬಂದಾನು !" ಎಂದಳು ಗಂಡನೊಂದಿಗೆ.

ಗೋವಿಂದಭಟ್ಟನು ಮೂಲೆಯಲ್ಲಿದ್ದ ಕೋಲನ್ನು ಎತ್ತಿಕೊಂಡು ಸಪ್ಪಳವಾಡುತ್ತಾ, ಬೀದಿಯ ಬಾಗಿಲು ತೆರೆದನು. ತರುವಾಯ ಜಗಲಿಯ ಮೇಲೆ ಕೋಲಿನಿಂದ ಹೊಡೆಯುತ್ತಾ, "ಯಾರೋ ಅವನು ?



ಎದ್ದು ಹೋಗೋ ! ಏಳೇಳು !" ಎಂದು ಅರಚಿದನು. ಜಗಲಿಯಲ್ಲಿ ಮಲಗಿದವನು ಮಿಸುಕಾಡಲಿಲ್ಲ. ಗೋವಿಂದಭಟ್ಟನಿಗೆ ಏನೋ ಅನುಮಾನವಾಗಿ ಆ ಮನುಷ್ಯನನ್ನು ಅಲುಗಾಡಿಸಿ ನೋಡಿದ. ಚಲನವೇನೂ ಕಂಡುಬರಲಿಲ್ಲ. ಭಟ್ಟನ ಎದೆ ಭಗ್ಗೆಂದಿತು.

"ಕೊಂಪೆ ಮುಳುಗಿಸಿದನಲ್ಲಾ ! ಇವ ಸತ್ತುಹೋಗಿದ್ದಾನೆ!" ಎಂದು ಕೀಚು ದನಿಯಿಂದ ಕೂಗಿದನು. "ಸತ್ತರೆ ಪೀಡೆ ಹೋಯಿತು. ಬನ್ನಿ ಒಳಗೆ" ಎಂದಳು ಕಾವೇರಮ್ಮ.

ಭಟ್ಟನು ಒಳಗೆ ಹೋಗಿ, "ಇಷ್ಟೇ ನಿನ್ನ ಬುದ್ಧಿ. ಪೀಡೆ ಈಗ ತಾನೇ ಸುತ್ತಿಕೊಂಡಿತು ಅನ್ನು. ಇವನು ಸತ್ತದ್ದಕ್ಕೆ ಇನ್ನು ಮೂರುದಿನ ದೇವಾಲಯ ಮುಚ್ಚಬೇಕು. ನಾಳೆ ಬೆಳಗ್ಗೆ ಶೆಟ್ಟಿಯವರ ಗುಮಾಸ್ತ ಬರುತ್ತಾನೆ. ನಾಡದು ಕಲ್ಯಾಣ ಮಹೋತ್ಸವ. ಹೇಗೆ ನಡೆದೀತು ! ಒಮ್ಮೆ ತಪ್ಪಿದರೆ ಮತ್ತೆ ಅವರ ಸಮಯ ಹೇಗೋ ?" ಎಂದನು.

"ಹೌದೊಂದ್ರೆ. ಹಾಗಾದರೆ ಈಗ ಏನುಮಾಡುವುದು ?" ಎಂದಳು ಕಾವೇರಮ್ಮ.

"ಇವನನ್ನು ಈ ರಾತ್ರಿಯಲ್ಲೇ ಸುಡುಗಾಡಿಗೊಯ್ದು ಗುಟ್ಟಾಗಿ ಹುಗಿದುಬಿಡಬೇಕು. ಊರಿಗೆ ಹೊಸಬನಾದುದರಿಂದ ನಾಳೆ ಯಾರೂ ಇವನನ್ನು ಕುರಿತು ವಿಚಾರಿಸಲಿಕ್ಕಿಲ್ಲ" ಎಂದ ಗೋವಿಂದಭಟ್ಟ.

"ಸುಡುಗಾಡಿನ ಕಾವಲುಗಾರನಿಗೆ ತಿಳಿಯುತ್ತದಲ್ಲಾ ?" ಎಂದು ಕಾವೇರಮ್ಮ ಹೇಳಲು, "ಸ್ವಲ್ಪ ದುಡ್ಡು ಅವನಕೈಗೆ ಹಾಕಿದರೆ ಬಾಯಿ ಮುಚ್ಚಿರುತ್ತಾನೆ" ಎಂದು ಹೇಳಿ ಗೋವಿಂದಭಟ್ಟನು, ಕಷ್ಟಕಾಲಕ್ಕೆಂದು ಕೂಡಿಟ್ಟಿದ್ದ ನೂರು ರೂಪಾಯಿಗಳನ್ನು ತೆಗೆದು ಸೊಂಟಕ್ಕೆ ಕಟ್ಟಿಕೊಂಡು ಹೊರಬಿದ್ದನು. ಒಳಗೆ ಭಯ ತುಂಬಿದ್ದರೂ ಮೊಂಡು ಧೈರ್ಯದಿಂದ ಕತ್ತಲೆಯ ದಾರಿಯಲ್ಲಿ ಸ್ಮಶಾನದ ಕಡೆಗೆ ಸಾಗಿದನು.

ಸ್ಮಶಾನದ ಕಾವಲುಗಾರನ ಗುಡಿಸಲು ಸ್ಮಶಾನದ ಪಕ್ಕದಲ್ಲೇ ಇತ್ತು. ಭಟ್ಟನು ಅವನನ್ನು ಹೊರಕ್ಕೆ ಕರೆದು, ಸಂಗತಿಯನ್ನೆಲ್ಲಾ ಹೇಳಿ, "ಈ ವಿಷಯ ಮೂರನೇಯವನಿಗೆ ತಿಳಿಯಕೂಡದು" ಎಂದನು.

ಗೋವಿಂದಭಟ್ಟನು ಹೇಳಿದಂತೆ ಕೆಲಸ ಮುಗಿಸಲು ನೂರು ರೂಪಾಯಿ ಕೊಡಬೇಕೆಂದು ಕಾವಲುಗಾರನು ಕೇಳಿದ. ಭಟ್ಟನು ಅವನೊಂದಿಗೆ ಸ್ವಲ್ಪ ವಾದವಿವಾದ ಜರುಗಿಸಿ ಎಪ್ಪತ್ತೈದು ರೂಪಾಯಿ ತೆಗೆದುಕೊಳ್ಳಲು ಅವನನ್ನು ಒಪ್ಪಿಸಿ, "ನಾನು ಹೋಗಿ ಶವವನ್ನು ತರುತ್ತೇನೆ. ಅಷ್ಟರೊಳಗೆ ನೀನು ಹೊಂಡ ತೆಗೆದು ತಯಾರು ಮಾಡಿಡು" ಎಂದು ಹೇಳಿ ಮನೆಗೆ ಹಿಂದಿರುಗಿದನು.

ಕಾವೇರಮ್ಮ ಒಂದು ಹಳೆಯ ಚಾಪೆಯನ್ನು ತೆಗೆದು ಜಗಲಿಯಲ್ಲಿಟ್ಟು ಕಾಯುತ್ತಿದ್ದಳು. ಗೋವಿಂದಭಟ್ಟ ಜಗಲಿಯಲ್ಲಿ ಬಿದ್ದುಕೊಂಡಿದ್ದವನನ್ನು ಆ ಚಾಪೆಯಲ್ಲಿ ಸುತ್ತಿ ಕಟ್ಟಿ, ತಲೆಯ ಮೇಲೆ ಹೊತ್ತುಕೊಂಡು ಮತ್ತೆ ಸ್ಮಶಾನದ ದಾರಿ ಹಿಡಿದನು. ಅರ್ಧ

ದೂರ ನಡೆಯುವಾಗ ಅವನಿಗೆ ಬಹಳ ಶ್ರಮವೆನಿಸಿತು. ದಾರಿಯಲ್ಲಿ ಅತ್ತಿತ್ತ ಗಮನಿಸಿ ಯಾರೂ ಇಲ್ಲವೆಂದು ತಿಳಿದು ತಲೆಯ ಭಾರವನ್ನು ಒಂದು ಜಗಲಿಯ ಮೇಲೆ ಇಳಿಸಿ ಸ್ವಲ್ಪ ನಿಂತನು.

ಆ ಸಮಯದಲ್ಲಿ ಭಟ್ಟನ ಭುಜದ ಮೇಲೆ ಯಾವನೋ ಸಪ್ಪಳಿಲ್ಲದೆ ಕೈಯಿಟ್ಟನು. ಕಿಟ್ಟನೆ ಕಿರಿಚಿಕೊಂಡು ಬರುವ ಶಬ್ದವನ್ನು ಹೇಗೋ ಅಡಗಿಸಿಕೊಂಡು ತಿರುಗಿ ನೋಡಿದ ಗೋವಿಂದಭಟ್ಟ.

"ಓಹೋ ! ಅರ್ಚಕಭಟ್ಟರಲ್ಲವೆ ? ಈ ಅರ್ಧರಾತ್ರಿ ಹೊತ್ತಿನಲ್ಲಿ ಎಲ್ಲಿಗೆ ಹೊರಟಿರೋ ? " ಎಂದು ಗೋವಿಂದಭಟ್ಟನ ಜುಟ್ಟನ್ನೂ ಬೋಳು ತಲೆಯನ್ನೂ ತಡವಿ ಗುರುತು ಹಿಡಿದು ಕೇಳಿತು ಆ ವ್ಯಕ್ತಿ. ಅದು ಹೆಂಡ ಕುಡುಕ ವೆಂಕಪ್ಪನೆಂದು ಭಟ್ಟನಿಗೂ ಅವನ ಸ್ವರದಿಂದ ಗೊತ್ತಾಯಿತು. "ನಿದ್ದೆ ಬರಲಿಲ್ಲ. ಹೀಗೆ ಹೊರಟೆ" ಎಂದ ಗೋವಿಂದಭಟ್ಟ.

"ಏನು ಬಹಳ ಶ್ವಾಸ ಬಿಡುತ್ತಿದ್ದೀರಲ್ಲಾ ? ಇದೇನೂ ಚಾಪೆಯ ಮೂಟೆಯ ಹಾಗಿದೆ ? ಏನಿದೆ ಅದರೊಳಗೆ ? " ಎಂದು ಶುರು ಮಾಡಿದ ವೆಂಕಪ್ಪ.

"ಮನೆಗೆ ಬೇಕಾದ ಸಾಮಾನು. ಅದಿರಲಿ. ನೀನು ಕಳ್ಳಿನಂಗಡಿಗೆ ಹೋಗಿಲ್ಲವೇನು ? ಮಜಾ ಮಾಡಿದ ಹಾಗೆ ಕಾಣುವುದಿಲ್ಲವಲ್ಲಾ ? " ಎಂದು ಭಟ್ಟನು ಭಯದಿಂದ ಬೆವರೊರೆಸಿ ಕೊಳ್ಳುತ್ತಾ ಕೇಳಿದ.

"ಯಾಕೆ ಕೇಳ್ತೀರಿ ಭಟ್ರೆ ? ಕಳ್ಳಂಗಡಿಯ ಕಿಟ್ಟಪ್ಪನಿಗೆ ಇಪ್ಪತ್ತೈದು ರೂಪಾಯಿ ಬಾಕಿ ಯಿದೆ. ಅದನ್ನು ತೀರಿಸದೆ ಒಂದು ಗುಟುಕೂ ಕೊಡಲಾರೆನೆಂದುಬಿಟ್ಟ. ಅದಕ್ಕೇ ಸುತ್ತುತ್ತೇನೆ" ಎಂದ ವೆಂಕಪ್ಪ.

"ಭಟ್ಟನು ಕೂಡಲೇ ತನ್ನ ಸೊಂಟದಲಿದ್ದ ಮಡಿಕೆಯಿಂದ ಇಪ್ಪತ್ತೈದು ರೂಪಾಯಿಗಳನ್ನೂ ತೆಗೆದು ಅವನಿಗೆ ಕೊಡುತ್ತ," ಇಕೋಪ್ಪ, ಇಪ್ಪತ್ತೈದು ರೂಪಾಯಿಗಳಿವೆ. ನಿನ್ನಂಥವನ ಸಂಕಟ ನನಗೆ ಗೊತ್ತು. ಹೋಗಿ ಗಂಟಲು ಪಸೆಮಾಡಿಕೊಳ್ಳಪ್ಪಾ.



ನಾಳೆ ಸಿಕ್ಕು, ಮಾತಾಡುವ" ಎಂದ. "ನಿಮ್ಮ ಪುಣ್ಯ ಭಟ್ರೇ" ಎಂದು ವೆಂಕಪ್ಪ ಹೊರಟುಹೋದ.

ಭಟ್ಟನು ಹಗುರಾಗಿ ಒಂದು ನಿಟ್ಟುಸಿರುಬಿಟ್ಟು, ಚಾಪೆಯ ಕಟ್ಟನ್ನು ತಲೆಯ ಮೇಲೆ ಏರಿಸಿಕೊಂಡು ಬೇಗಬೇಗ ನಡೆಯುತ್ತ ಸ್ಮಶಾನವನ್ನು ತಲಪಿದನು. ಅಷ್ಟರಲ್ಲಿ ಕಾವಲುಗಾರನು ಹೊಂಡ ತೆಗೆದು ಸಿದ್ಧ ಮಾಡಿ ಕಾಯುತ್ತಿದ್ದನು. ಗೋವಿಂದಭಟ್ಟನು ಚಾಪೆಯ ಕಟ್ಟನ್ನು ಇಳಿಸುವಷ್ಟರೊಳಗೆ ಚಾಪೆಯ ಕಟ್ಟು ದಭಾಲ್ಲನೆ ಹೊಂಡದೊಳಗೆ ಬಿದ್ದುಬಿಟ್ಟಿತು.

"ಸತ್ತೆನಪ್ಪೋ !" ಎಂದು ಕಿಟ್ಟ ಸ್ವರದಿಂದ ಕೂಗುತ್ತಾ ಅದರೊಳಗಿದ್ದ ಮನುಷ್ಯ ಹೊರಗೆ ಬಂದ. ಗೋವಿಂದಭಟ್ಟನ ಶರೀರವೆಲ್ಲಾ ರೋಮಾಂಚನವಾಗಿ ಕಂಪಿಸಿ ಬೆವರಿತು.

"ಇದೇನು ಭಟ್ಟರೇ ! ಬದುಕಿರುವವನನ್ನ ಹುಗಿಯಲು ಹೊತ್ತು ತಂದಿರಾ ?" ಎಂದು ಕಾವಲುಗಾರನು ಬಿದ್ದುಬಿದ್ದು ನಕ್ಕನು. ಆಗ ಹೊಂಡದಿಂದ

ತಡಕಾಡಿ ಮೇಲೆ ಬಂದ ಮನುಷ್ಯ ಮೈಕೊಡರುತ್ತ "ಈಗ ನಾನೆಲ್ಲಿದ್ದೇನೆ ? ನನ್ನದು ಹೊದ್ದು ನಿದ್ದೆಯಪ್ಪರಾ !" ಎಂದ.

"ಎಲ್ಲಿದ್ದೇನೆ, ಸುಡುಗಾಡಿನಲ್ಲಿ ! ಬೆಂಕಿ ಇಕ್ಕು ನಿನ್ನ ನಿದ್ದೆಗೆ !" ಎಂದು ಭಟ್ಟ ಅವನ ಮೇಲೆ ಉರಿದು ಬಿದ್ದ. ಆ ಮನುಷ್ಯ ಹೆದರಿ ಹಿಂದಿರುಗಿ ನೋಡದೆಯೇ ಓಡಿಹೋದ.

ಆಮೇಲೆ ಭಟ್ಟನು ಕಾವಲುಗಾರನ ಕೈಯಿಂದ ಹಣವನ್ನು ವಾಪಾಸು ಪಡೆಯಲು ಸ್ವಲ್ಪ ವಾದ ಮಾಡಿ ನೋಡಿದನು. "ಹೊಂಡ ತೆಗೆದು ಬಹಳ ಕಷ್ಟಪಟ್ಟೆ. ಇನ್ನು ಈ ಹೊಂಡ ಮುಚ್ಚಬೇಕು. ಸುಮ್ಮನೆ ವಾದಮಾಡಿದರೆ ಮತ್ತೆ ಗುಟ್ಟೆಲ್ಲ ರಟ್ಟಾಗಿ ಹೋದೀತು !" ಎಂದು ಅವನು ಹೆದರಿಸಲು, ಭಟ್ಟನು ಬರಿಗೈಯಲ್ಲೇ ಮನೆಗೆ ಮರಳಿದ. ಶವವಿಲ್ಲದಿದ್ದರೂ ರಹಸ್ಯವಿತ್ತು. ಅದು ಬಯಲಾದರೆ ಭಟ್ಟನ ಹುಳುಕೂ ಹೊರಬಿದ್ದು ಹೋಗುತ್ತದೆ. ಅವನು ಮನೆಗೆ ಬಂದಾಗ ಕಾವೇರಮ್ಮ ಒಂದು ನಿದ್ದೆಮಾಡಿ, ಗಂಡನು ತನಗೆ ಪಟ್ಟೆ ಸೀರೆ ಕೊಂಡುಕೊಂಡಂತೆ ಕನಸು ಕಂಡಿದ್ದಳು.

ಅದನ್ನು ಕೇಳಿ ಗೋವಿಂದಭಟ್ಟನು, "ನಾಡದು ನಿನ್ನ ಕನಸು ನಿಜವಾಗಿಬಿಡುತ್ತದೆ. ಶ್ರೀಮಂತಶೆಟ್ಟರು ಮುತ್ತೈದೆಗೆ ನೂಲಿನ ಸೀರೆ ಕೊಡುವರೆ ?" ಎಂದನು.

ಆದರೆ ಮರುದಿನ ಶೆಟ್ಟಿಯವರ ಗುಮಾಸ್ತ ಬರಲೇ ಇಲ್ಲ. ಸಾಯಂಕಾಲ ಶೆಟ್ಟಿಯವರು ಪತ್ನಿಯೊಂದಿಗೆ ಬರಲೂ ಇಲ್ಲ.

ನಾಲ್ಕುದಿನಗಳವರೆಗೆ ಆ ಶೆಟ್ಟಿಯವರ ದಾರಿ ನೋಡಿ, ಕಡೆಗೆ ಗೋವಿಂದಭಟ್ಟನು ಸ್ವತಃ ಶೆಟ್ಟಿಯವರ ಮನೆಗೆ ಹೋಗಿ ಏನು ಸಂಗತಿ ಎಂದು ವಿಚಾರಿಸಿದನು. ಆಗ ತಾನೇ ಶೆಟ್ಟಿಯವರು ಪತ್ನೀ ಸಮೇತರಾಗಿ ಎಲ್ಲಿಂದಲೋ ಹಿಂದಿರುಗಿ ಬಂದಿದ್ದರು. ಭಟ್ಟನನ್ನು ನೋಡಿ ಅವರು,

"ಮತ್ತೇನಿಲ್ಲ ಭಟ್ಟರೇ. ನಾನೇ ನಿಮಗೆ ಸುದ್ದಿ ಕಳುಹಿಸುವಾ ಎಂದಿದ್ದೆ. ಸಾಧ್ಯವಾಗಲಿಲ್ಲ. ನಿಮ್ಮ ಹತ್ತಿರ ಮಾತನಾಡಿದ ದಿನವೇ ನನ್ನ ಅಪ್ಪನಿಗೆ ಮೈಸರಿಯಿಲ್ಲವೆಂದು ಸುದ್ದಿ ಬಂತು. ಆ ಊರು ದೂರವಾದರೂ ಹೊರಡಲೇ ಬೇಕಾಯಿತು. ಈಗ ಅಪ್ಪ ಚೆನ್ನಾಗಿದ್ದಾರೆ ಬಿಡಿ. ಅಪ್ಪನ ಕೋರಿಕೆಯಂತೆ ಆ ಊರಿನ ರಾಮದೇವಾಲಯದಲ್ಲೇ ಕಲ್ಯಾಣ ಮಹೋತ್ಸವದ ಹರಕೆ ಕೂಡಾ ತೀರಿಸಿಬಿಟ್ಟೆ. ಇಗೊಳ್ಳಿ. ಐದು ರೂಪಾಯಿ ಕೊಡುತ್ತೇನೆ. ನಿಮ್ಮ ದೇವಾಲಯದಲ್ಲಿ ನನ್ನ ಹೆಸರಿನಲ್ಲಿ ಒಂದು ಅರ್ಚನೆ ಮಾಡಿಬಿಡಿ" ಎಂದರು ಶೆಟ್ಟಿಯವರು. ಶೆಟ್ಟರು ಮಾಡಿಸಿದ ರಾಮದೇವರ ಕಲ್ಯಾಣದೊಂದಿಗೆ ಬಡ ಗೋವಿಂದಭಟ್ಟನ ಮದುವೆಯೂ ಆಗಿಹೋಗಿತ್ತು !





# ಅಮರವಾಣಿ

ದಮಶ್ಶಮಃ ಕ್ಷಮಾ ಧರ್ಮಃ
ಧೃತಿಸ್ಸತ್ಯಂ ಪರಾಕ್ರಮಃ
ಪಾರ್ಥಿವಾನಾಂ ಗುಣಾ (ರಾಜನ್)
ದಂಡಶ್ಚಾಪ್ಯಪರಾಧಿಷು. ೧.

ಇಂದ್ರಿಯ ನಿಗ್ರಹ, ಚಿತ್ತಶುದ್ಧಿ, ಸಹನೆ, ಧರ್ಮ, ಧೈರ್ಯ, ಸತ್ಯ, ಪರಾಕ್ರಮ, ಅಪರಾಧಿಗಳನ್ನು ದಂಡಿಸುವುದು ಇವೆಲ್ಲ ರಾಜರ ಗುಣಗಳು.

ನಯಶ್ಚ ವಿನಯಶ್ಚೋಭೌ
ನಿಗ್ರಹಾನುಗ್ರಹಾವಪಿ
ರಾಜವೃತ್ತಿ ರಸಂಕೀರ್ಣಾ
ನ ನೃಪಾಃ ಕಾಮವೃತ್ತಯಃ ೨.

ನಯ ವಿನಯ ನಿಗ್ರಹ ಅನುಗ್ರಹಗಳಲ್ಲಿ ರಾಜರು ತಮ್ಮ ಮನಬಂದಂತೆ ನಡೆದುಕೊಳ್ಳಲಾರರು.

ಶಾಸನಾ ದ್ವಾ ವಿಮೋಕ್ಷಾ ದ್ವಾ
ಸ್ತೇನಃ ಸ್ತೇಯಾದ್ವಿಮುಚ್ಯತೇ
ರಾಜಾತ್ವ ಶಾಸನ್ಪಾಪಸ್ಯ
ತ ದವಾಪ್ನೋತಿ ಕಿಲ್ಬಿಷಂ. ೩.

ರಾಜನು ದಂಡಿಸಿದರೂ ಬಿಟ್ಟರೂ ಕಳ್ಳನ ಪಾಪ ಹೊರಟು ಹೋಗುತ್ತದೆ. ಆದರೆ ದಂಡಿಸದೆ ಬಿಟ್ಟರೆ ಕಳ್ಳನ ಪಾಪವು ರಾಜನನ್ನೇ ಸುತ್ತಿಕೊಳ್ಳುತ್ತದೆ.

Photo by P. V. Subramanyam



ಬಹುಮಾನ
ಪಡೆದ ಶೀರ್ಷಿಕೆ

ಸ್ನೇಹಿತರ ಓದು ಒಟ್ಟಿನಲಿ

ಕಳುಹಿಸಿದವರು :
ಎಂ. ಎ. ಕುಬೇರಗೌಡ

Photo by K. K. Rao




ಬ್ರಾಂಚ್ ಪೋಸ್ಟ್‌ಮಾಸ್ಟರ್
ಪಿನ್‌ಕೋಡ್: ೫೭೩೨೦೫

ಜಾಣನ ಓದು ಗುಟ್ಟಿನಲಿ

ಬಹುಮಾನ
ಪಡೆದ ಶೀರ್ಷಿಕೆ

# ಫೋಟೋ ಶೀರ್ಷಿಕೆಯ ಸ್ಪರ್ಧೆ :: ಬಹುಮಾನ ರೂ. ೨೦





★ ಮೇಲಿನ ಫೋಟೋಗಳಿಗೆ ಶೀರ್ಷಿಕೆಗಳು ಮಾರ್ಚ್ ೧೫ ರೊಳಗೆ ತಲಪಬೇಕು.

★ ಶೀರ್ಷಿಕೆಗಳು ಒಂದಕ್ಕೊಂದು ಸರಿಹೊಂದುವಂತಿರಬೇಕು. ಶೀರ್ಷಿಕೆಗಳನ್ನು ಕಾರ್ಡಿನಲ್ಲೇ ಬರೆಯಬೇಕು. ಗೆದ್ದ ಶೀರ್ಷಿಕೆಗಳು ಮೇ '೭೫ರ ಸಂಚಿಕೆಯಲ್ಲಿ ಪ್ರಕಟವಾಗುತ್ತವೆ.

## ಚಂದಮಾಮ

### ಈ ಸಂಚಿಕೆಯಲ್ಲಿರುವ ಕಥೆಗಳು:



ಎರಡನೇ ಹೊದಿಕೆಯ ಚಿತ್ರ:
**ಕಲ್ಲಿನಲ್ಲಿ ಶಿಲ್ಪ**

ಮೂರನೇ ಹೊದಿಕೆಯ ಚಿತ್ರ:
**ಕಲ್ಲಿನ ಮೇಲೆ ಶಿಲ್ಪ**


Printed by B. V. REDDI at The Prasad Process Private Ltd., and Published by B. VISWANATHA REDDI for Chandamama Publications, 2 & 3, Arcot Road, Madras-600026. Controlling Editor: 'CHAKRAPANI'


ರಾಮ
ಶ್ಯಾಮರ
ಅಪಹರಣ!


JEWELL
"ನೋಡು... ಆ ಚಿನ್ನಾಭರಣಗಳ ಅಂಗಡಿಯನ್ನು, ನಾವು ಹಿಡಿಯಲೇ ಬೇಕು ಆ ಕಳ್ಳರನ್ನು!"


"ಸಂಗಡಿಗರೇ, ನೀವಾ ಹುಡುಗರನ್ನು ಹಿಡಿಯಿರಿ— ಪೋಲೀಸರಿಗೆ ತಿಳಿಸಿಯಾರು, ಅವರನ್ನು ಬಂಧಿಸಿರಿ!"


ಒಂದು ಕಾರಿನಲ್ಲಿ ಹಿಡಿದೆಳೆದು ಕೂರಿಸಿದರು, ರಾಮ ಶ್ಯಾಮರನ್ನು ಬಲುದೂರ ಸಾಗಿಸಿದರು.


ಖಾಲಿ ಗುಡಿಸಿಲೊಂದರಲ್ಲಿ ಅವರನ್ನು ಕಟ್ಟಿಹಾಕಿದರು, ನಮ್ಮ ವೀರ ಬಾಲಕರು ಅವರ ಬಂದಿಗಳಾದರು.


"ಶ್ಯಾಮ ಹೇಳಿದನು ರಾಮ, ಅಂಜದಿರು ನೀನು, ಬರುವರಿಲ್ಲಿ ಪೋಲೀಸರು, ಉಪಾಯ ಮಾಡಿಹೆನು"


"ಪಾಪಿನ್ಸ್. ನಾನುದುರಿಸಿಹೆನು ದಾರಿಯಲ್ಲೆಲ್ಲ, ಅದನ್ನು ಅನುಸರಿಸುವರು, ಇದಕೆ ಸಂಶಯವಿಲ್ಲ."




"ಸಿಹಿಯಾದ ಪಾಪಿನ್ಸ್ ನಮ್ಮ ರಕ್ಷಿಸುವುದು, ನಮ್ಮ ಜೀವನಕ್ಕೆ ಸಂತಸವ ನೀಡುವುದು."

# ದಂತಭಕ್ಷಕನ ಕಪಟ ಸಂಧಾನ
















ಆದರೆ ಆ ಆನಂದ ಹೆಚ್ಚು ಸಮಯ ಉಳಿಯುವುದಿಲ್ಲ. ಬಾಯಿ ಪ್ರದೇಶದ ನಿವಾಸಿಗಳು ನಿದ್ದೆ ಮಾಡುತ್ತಿರುವಾಗ ಒಂದು ವಿಚಿತ್ರ ಘಟನೆ ಸಂಭವಿಸುತ್ತದೆ.



# ಅವಳಿ ಮಕ್ಕಳ ಕಥೆ

March 1975

೮

[ಅವಳಿಜವಳಿ ರಾಜಕುಮಾರಿಯರನ್ನು ಹುಡುಕಲು ಹೊರಟ ಅವಳಿಜವಳಿ ಸೋದರರು ಅಡವಿಯಲ್ಲಿ ಒಬ್ಬ ಗಡ್ಡದವನ ಕೈಗೆ ಸಿಕ್ಕಿ, ಅವನನ್ನು ಸೋಲಿಸಿ, ಅವನಿಂದ ಅದ್ಭುತ ಶಕ್ತಿಯ ಮಂತ್ರ ಭಸ್ಮಗಳನ್ನೂ ಅಂಜನಗಳನ್ನೂ ವಶಪಡಿಸಿಕೊಂಡರು. ಅಲ್ಲಿಂದ ಮೂವರೂ ಮತ್ತೆಲ್ಲಿಗೋ ಹೋಗುತ್ತಿರಲು, ಮುಂದೆ ಹೋಗುತ್ತಿದ್ದ ಉದಯನ ಹಠಾತ್ತನೆ ಮಾಯವಾಗಿ ಹೋದ.]

ಉದಯನನು ಮಾಯವಾಗಿ ಹೋದುದರಿಂ ಉಂಟಾದ ಆಘಾತದಿಂದ ತಮ್ಮನ್ನು ಸಮಾಳಿಸಿಕೊಂಡು ಸಂಧ್ಯಾ, ನಿಶೀಥರು, ತಮ್ಮ ಕುದುರೆಗಳ ವೇಗವನ್ನು ಬಹಳ ಮಟ್ಟಿಗೆ ತಗ್ಗಿಸಿಕೊಂಡು ನಾಲ್ಕು [illegible]ಕ್ಕಲೂ ನೋಡುತ್ತ, ಮುಂದೆ ಮುಂದೆ ಸಾಗಿದರು. "ಓಹೋ ನಾನಿಲ್ಲಿದ್ದೇನೆ" ಎಂದು ಉದಯನನ ಕಂಠ [illegible] ಕೇಳಿಸಲಾರದೆ ಎಂದು ಅವರ ಕಿವಿಗಳು ಹಾರೈಸಿಕೊಂಡಿದ್ದುವು. ಅವರು ಮುಂದೆ ಕಾಣುವ ಮಹಾ [illegible] ಸಮೀಪಕ್ಕೆ ಹೋಗಿ ಏನೋ ಹೆದರಿ [illegible] ನಿಂತುಬಿಟ್ಟರು.

ಏಕೆಂದರೆ ಅವರ ಮುಂದೆ ಬಾಯಿಬಿಟ್ಟ ನೆಲದಂತೆ ಭಾರಿ ಕಂದಕವು ಕಾಣಿಸಿತು. ಆ ಪಾತಾಳ ಕಂದಕವು ಭವನದ ಸುತ್ತಲೂ ಬಳಸಿಕೊಂಡಿದ್ದಿತು. ತಮ್ಮ ಸಹೋದರ ಉದಯನನು ಕುದುರೆಯೊಂದಿಗೆ ಅದರೊಳಗೆ ಬಿದ್ದಿರಬೇಕೆಂದು ಅವರಿಗೆ ತೋರಿತು. ಅವರು ಕಂದಕದ ಬದಿಯಲ್ಲಿ ಬಾಗಿ ಕಿವಿಗೊಟ್ಟು, ಕಣ್ಣಿಟ್ಟು, ಪರೀಕ್ಷಿಸಿದರೂ ಉದಯನನು ಕಂದಕದೊಳಗೆಬಿದ್ದ ಜಾಡು ತಿಳಿಯಲಿಲ್ಲ. ನೆಲದಲ್ಲಿ ಕೂಡಾ ಜಾರಿ ಬಿದ್ದುದರ ಯಾವ ಗುರುತೂ ಕಾಣಿಸಲಿಲ್ಲ. ಯೋಚನೆ ಹರಿದಾಗ ಆಗ ಅವರಿಗೆ ಉದಯನನ ಕೈಯಲ್ಲಿರುವ



ಮಾಯಾಭಸ್ಮದ ನೆನಪಾಯಿತು. ಅದರಿಂದ ಅವನು ಕಂದಕದಲ್ಲಿ ಬೀಳದೆ ಮಾಯಾ ರೂಪದಲ್ಲಿ ಆ ಭವನದೊಳಗೇ ಹೋಗಿರಬೇಕೆಂದು ತೋರಿತು. ಇದರಿಂದ ಅವರಿಗೆ ಧೈರ್ಯ ಬಂದಿತು.

ಇನ್ನು ಹೇಗಾದರೂ ಮಾಡಿ ಆ ಕಂದಕವನ್ನು ದಾಟಿ ಭವನದೊಳಗೆ ಪ್ರವೇಶಿಸ ಬೇಕಾಗಿತ್ತು. ಬಹಳ ಅಗಲವಾದ ಕಂದಕವದು. ಎಲ್ಲಿಯಾದರೂ ಅಗಲ ಕಡಮೆಯಾಗಿರುವುದೇನೋ ಎಂದು ನೋಡಲು ಅವರಿಬ್ಬರೂ ಕಂದಕದ ಬದಿಯಲ್ಲಿಯೇ ನೋಡುತ್ತಾ ಸುತ್ತ ತೊಡಗಿದರು.

ಬ್ರಹ್ಮಾಂಡವನ್ನು ಪ್ರದಕ್ಷಿಣೆ ಮಾಡಿದಂತೆ ಸುತ್ತುತ್ತಾ ಹೊರಟಿದ್ದ ಸ್ಥಳಕ್ಕೇ ಬಂದು ಮುಟ್ಟಿದರು. ಆಗ ಅವರಿಗೆ ತಮ್ಮ ಮೂಢತನದ ಅರಿವಾಯಿತು. ಭವನದೊಳಗೆ ಯಾರೂ ಪ್ರವೇಶಿಸದಿರಲಿಕ್ಕಾಗಿಯೇ ಆ ಕಂದಕವನ್ನು ತೋಡಲಾಗಿದೆಯೆಂಬುದನ್ನು ಮೊದಲೇ ತಿಳಿದುಕೊಳ್ಳಲಾರದೆ ಹೋದುದಕ್ಕೆ ನಾಚಿಕೊಂಡರು. ಹೀಗಾದರೆ ಇನ್ನು ಆ ಭವ… ದೊಳಗೆ ಪ್ರವೇಶಿಸುವುದು ಹೇಗೆ? ಅದರ ರಹ… ತಿಳಿಯದೆ ಸುಮ್ಮನಿರುವುದಾದರೂ ಹೇಗೆ?

ಸ್ವಲ್ಪ ಹೊತ್ತು ತೀವ್ರವಾಗಿ ಆಲೋಚಿಸಿ… ಮೇಲೆ ಸಂಧ್ಯಾನು ನಿಶೀಥನನ್ನು ನೋಡಿ, "ಹೀ… ಹೊತ್ತು ಕಳೆದರಾಗಲಿಲ್ಲ. ಹೇಗಾದರೂ ಕಂದಕವನ್ನು ದಾಟಿಯೇ ತೀರಬೇಕು. ಸಾಹಸಮಾಡೋಣ. ನಮ… ಕುದುರೆಗಳಿಗೆ ಇದೊಂದು ಪರೀಕ್ಷೆಯಾಗಲಿ. ಕುದು… ಗಳನ್ನು ವೇಗವಾಗಿ ಓಡಿಸಿಕೊಂಡು ಬಂದು ಒಮ್ಮೆಗೆ… ಹಾರಿಸಿಬಿಡೋಣ. ಆಚೆಯ ದಡ ಸೇರಿದರೆ ನಮ… ಅದೃಷ್ಟ. ಕಂದಕದಲ್ಲೇ ಬಿದ್ದರೆ ಕುದುರೆಗಳೇ ಸತ್ತಾ… ನಾವು ಸಾಯಲಾರೆವು. ನಮ್ಮ ಆಯುರ್ದಾ… ಗಟ್ಟಿಯಾಗಿದೆಯೆಂದು ಜ್ಯೋತಿಷ್ಕರು ಹೇಳಿ… ರಷ್ಟೆ?" ಎಂದು ಉತ್ಸಾಹ ಪಡಿಸಿದ.

ಈ ಯೋಚನೆಗೆ ನಿಶೀಥನೂ ಸಂತೋಷದಿ… ಒಪ್ಪಿದ. ಇಬ್ಬರೂ ತಮ್ಮ ತಮ್ಮ ಕುದುರೆಗಳ ಬೆ… ತಟ್ಟಿ ಅದರ ಮೇಲೇರಿ ಸ್ವಲ್ಪ ದೂರ ಹಿಂದ… ಹೋಗಿ, ಶರವೇಗದಿಂದ ಓಡಿಸಿಕೊಂಡು ಬಂ… ಒಮ್ಮೆಗೇ ಕುದುರೆಗಳನ್ನು ಹಾರಿಸಿ ಕಂದಕವನ್ನು ದಾಟಿಬಿಟ್ಟರು.

ಅವರಿಬ್ಬರ ಕುದುರೆಗಳಿಗೆ ಕೂಡಾ ಯಾ… ಅಪಾಯವೂ ಆಗದೆ ಇಬ್ಬರೂ, ಆಚೆಯ ಬದಿಯನ್ನು ಸೇರಿದರು. "ಅಬ್ಬ! ದೇವರ ದಯೆ! ಇಂತ… ಕಂದಕವನ್ನು ನಾವು ದಾಟಿದುದೊಂದು ಶ… ಸೂಚನೆಯೇ ಸರಿ. ಇನ್ನು ಮೇಲೆ ನಮಗೆ… ಜಯವೇ ಎಂದು ನಂಬಬಹುದು" ಎಂ… ಸಂತೋಷದಿಂದ ಹೇಳಿಕೊಂಡರು. ಇಬ್ಬರೂ ಭವ… ಭವ್ಯಾಕಾರವನ್ನು ನೋಡುತ್ತ ಸಾವಧಾನದಿ… ಒಳಗೆ ಪ್ರವೇಶ ಮಾಡಿದರು.

ಅವರನ್ನು ಮಾತಾಡಿಸುವವರಾರೂ ಅಲ್ಲ… ಕಾಣಲಿಲ್ಲ. ಆ ಭವನದೊಳಗೆ ಮನುಷ್ಯ ಸಂಚ…

ರುವಂತೆ ತೋರಲೇ ಇಲ್ಲ. ಲೆಕ್ಕವಿಲ್ಲದಷ್ಟು ದ್ವಾರಗಳಿದ್ದುವಾದರೂ ಒಂದಕ್ಕೂ ಬಾಗಿಲುಗಳಿರಲಿಲ್ಲ. ಒಂದೊಂದೇ ದ್ವಾರವನ್ನು ದಾಟುತ್ತ ಹೋಗುತ್ತಿದ್ದಾಗ, ಪ್ರತಿದ್ವಾರದ ಎರಡು ಬದಿಗಳಲ್ಲಿಯೂ ದಾನವರ ಶಿಲಾ ಪ್ರತಿಮೆಗಳಿರುವುದನ್ನು ನೋಡಿದರು. ಕಟ್ಟಕಡೆಗೆ ಅವರು ಬ್ರಹ್ಮಾಂಡದಂತಹ ಒಂದು ದ್ವಾರವನ್ನು ನೋಡಿದರು.

ಅದು ನಿಜಕ್ಕೂ ದ್ವಾರವೇ ಅಲ್ಲ. ತಾಳೇ ಮರದಷ್ಟು ಎತ್ತರವಾದ ಒಬ್ಬ ರಾಕ್ಷಸನ ಕಾಲುಗಳು ಹಾಗೆ ನಿಂತಿದ್ದುವು. ನಿಂತಲ್ಲೇ ನಿದ್ದೆ ಮಾಡುತ್ತಿದ್ದ ರಾಕ್ಷಸ. ಕಾಲುಗಳ ನಡುವಿನ ಖಾಲೀ ಸ್ಥಳವು ದ್ವಾರದಂತೆ ಕಾಣಿಸುತ್ತಿತ್ತು. ಈ ರಾಕ್ಷಸನ ಎರಡು ಬದಿಗಳಲ್ಲಿ ಎರಡು ದೊಡ್ಡ ದೊಡ್ಡ ಸಿಂಹ ವಿಗ್ರಹಗಳಿದ್ದುವು. ಅವು ಮೇಲೆ ಹಾರಲು ಸಿದ್ಧವಾಗಿರುವಂತೆ, ಜೀವಕಳೆಯಿಂದ ಭಯಪಡಿಸುತ್ತಿದ್ದುವು. ಅಂತೆಯೇ ಅವುಗಳನ್ನು ನೋಡಿದ ಕೂಡಲೇ "ಓ !! ಸಿಂಹಗಳು !" ಎಂದು ಗಟ್ಟಿಯಾಗಿ ಇಬ್ಬರೂ ಚೀರಿ ಒಬ್ಬರನ್ನೊಬ್ಬರು ಹಿಡಿದುಕೊಂಡರು. ಅವರ ಕೂಗು ಕೇಳಿ ನಿಂತಲ್ಲೇ ತೂಕಡಿಸುತ್ತಿದ್ದ ರಾಕ್ಷಸನಿಗೆ ಎಚ್ಚರವಾಯಿತು. ಅವನು ಒಮ್ಮೆಗೇ ಕುಳಿತು ಸಂಧ್ಯಾ ನಿಶೀಥರನ್ನು ತನ್ನೆರಡು ಕೈಗಳಿಂದೆತ್ತಿ ಮುಷ್ಟಿಯೊಳಗೆ ಹಿಡಿದು, ಹರವಾದ ತನ್ನ ಮುಖದಬಳಿಗೆ ತಂದು, ಒಣಗಿದ ತಾಳೇ ಗರಿಗಳು ಹೊಡೆದುಕೊಳ್ಳುವಂತಹ ಅಬ್ಬರಿಸುವ ಕಂಠದಿಂದ, "ಭೇಷ್ ! ಭೇಷ್ ! ಇನ್ನೆರಡು ನರವಿಗ್ರಹಗಳು !" ಎಂದ. ಈ ಮಾತು ಕೇಳಿದ ಕೂಡಲೇ ಭವನದಲ್ಲಿ ತಾವು ನೋಡುತ್ತಾ ಬಂದ ಮನುಷ್ಯ ವಿಗ್ರಹಗಳೆಲ್ಲ ಏನೋ ಮಾಯೆಯಿಂದ ತಯಾರಾದ ನಿಜಮಾನವರೇ ಎಂದು ಅವರು ಊಹಿಸಿಕೊಂಡರು.

ಆಕಸ್ಮಿಕವಾಗಿ ಬಲಿಷ್ಠನಾದ ರಾಕ್ಷಸನ ಕೈಯೊಳಗೆ ಸಿಕ್ಕಿಬಿದ್ದುದನ್ನು ನೋಡಿ ಇಬ್ಬರೂ ತುಂಬ ಚಡಪಡಿಸಿದರು. ಇನ್ನು ತಪ್ಪಿಸಿಕೊಳ್ಳುವ ಬಗೆ ಹೇಗೆ ?

ಇಂತಹ ಗಂಡಾಂತರಗಳು ಬರಬಹುದೆಂದು ಅವರಿಗೆ ಗೊತ್ತೇ ಇತ್ತು. ಬಂದ ಆಪತ್ತುಗಳನ್ನು





ಬುದ್ಧಿಬಲದಿಂದ ತಪ್ಪಿಸಿಕೊಳ್ಳುವುದರಲ್ಲೇ ಇದೆ ಜೀವಿತದ ಸಾರ್ಥಕತೆ. ಹೆದರಿದರೆ ಯಾವ ಉಪಾಯವೂ ತೋರದು.

ಅಂತೆಯೇ ನಿಶೀಥನು ತನ್ನ ಸಹೋದರನಿಗೆ ಧೈರ್ಯವನ್ನು ಸೂಚಿಸಿ, ತಾನು ರಾಕ್ಷಸನೊಂದಿಗೆ ಮಾತಾಡಲು ಸಿದ್ಧನಾದನು. ಅವನಿಗೆ ಒಮ್ಮೆಲೇ ಗಡ್ಡದ ಮಾಂತ್ರಿಕನ ನೆನಪಾಯಿತು. ನಿರಾಶೆಯಲ್ಲಿ ಆಶೆಯಂತೆ, ಆ ಮಾಂತ್ರಿಕ ಗಡ್ಡದವನ ಸಮಾಚಾರ ಹೇಳಿದರೆ ಈ ರಾಕ್ಷಸ ಏನು ಮಾಡುವನೋ ನೋಡೋಣವೆಂದು ಅವನಿಗೆ ತೋರಿತು.

ನಿಶೀಥನು ರಾಕ್ಷಸನ ಅಂಗೈಯ ಮೇಲೆ ನಿಂತುಕೊಂಡು, "ಓಹೋಯ್ ಭೂತಾಕಾರದ ಮಹಾಮಹಿಮ ! ನಮ್ಮನ್ನು ಯಾರೆಂದು ಆಲೋಚನೆ ಮಾಡಿದೆಯೋ ? ನಾವು ಇಲ್ಲಿಗೆ ಕಳ್ಳತನ ಮಾಡಲಿಕ್ಕಾಗಿಬಂದವರಲ್ಲ. ಮಾರುದ್ದ ಗಡ್ಡದ ಗೇಣುದ್ದದ ಮಹಾನುಭಾವ ನಮ್ಮನ್ನು ಒಂದು ಕೆಲಸಕ್ಕೆ ಕಳುಹಿಸಿದ್ದಾನೆ. ಅದಕ್ಕೇ ಎಲ್ಲೆಲ್ಲೋ ಹುಡುಕುತ್ತಾ ಇಲ್ಲಿ ಬಂದೆವು..." ಎಂದು ಇನ್ನೇನೋ ಹೇಳಲಿಕ್ಕಿದ್ದನು.

ಅಷ್ಟರಲ್ಲಿ ರಾಕ್ಷಸನು ಆತುರದಿಂದ ಬಾಯಿ ತೆರೆದು "ಆಂ ? ಆ ನರಮನುಷ್ಯ ಇನ್ನೂ ಬದುಕಿಯೇ ಇದ್ದಾನೆಯೋ ? ಆತ ಇಷ್ಟುದಿನ ಹಿಂದಿರುಗದೆ ಇದ್ದುದರಿಂದ ಎಲ್ಲಿ ಸತ್ತನೋ ಎಂದು ಕೊಂಡಿದ್ದೆ. ಯಾವ ಅಪಾಯಕ್ಕೂ ಬೀಳದೆ ಬದುಕಿಯೇ ಇದ್ದಾನೆಯೋ ? ಏನು ಕೆಲಸಕ್ಕಾಗಿ ನಿಮ್ಮನ್ನು ಕಳುಹಿಸಿದ್ದಾನೆ ? ಬೇಗ ಹೇಳಿ" ಎಂದು ಅವಸರ ಪಡಿಸಿದ.

ನಿಶೀಥನು ರಾಕ್ಷಸನೊಂದಿಗೆ, "ಕೇಳು ಮತ್ತೆ, ಅವನ ಪ್ರಾಣಕ್ಕೆ ಯಾವ ಹಾನಿಯೂ ಉಂಟಾಗಲಿಲ್ಲ. ಆದರೆ ಅವನ ರಹಸ್ಯವನ್ನೆಲ್ಲ ಯಾರೋ ಕಂಡುಹಿಡಿದು ಬಿಟ್ಟರಂತೆ. ಅಷ್ಟಕ್ಕೆ ಬಿಡದೆ ಅವನ ಹತ್ತಿರ ಇದ್ದ ಮಹತ್ವದ ಭಸ್ಮ ಅಂಜನ ಕರವಸ್ತ್ರಗಳನ್ನೆಲ್ಲ ಕದ್ದುಕೊಂಡು ಹೋಗಿಬಿಟ್ಟರಂತೆ. ಅವುಗಳು ಇಲ್ಲದುದರಿಂದ ಒಂದಡಿ ತೆಗೆದಿಡಲೂ ಅವನಿಗೆ ಸಾಧ್ಯವಾಗುವುದಿಲ್ಲವಂತೆ. ಈ ಸಮಾಚಾರವನ್ನು ನಿಮಗೆ ಹೇಳಿ ಮತ್ತೆ ಕೆಲವು ಅಂಜನ ಕರಡಿಗೆಗಳನ್ನೂ ಭಸ್ಮದ ಡಬ್ಬಿಗಳನ್ನೂ ಹೊಟ್ಟೆ ತುಂಬಿಸುವ ಕರವಸ್ತ್ರವನ್ನೂ ಕಳುಹಿಸಲು ಹೇಳುವಂತೆ ಹೇಳಿದ್ದಾನೆ. ಅವುಗಳು ನಿಮ್ಮ ಹತ್ತಿರ ಇದೆಯೋ ಇಲ್ಲವೋ, ಕೊಡುವರೋ ಬಿಡುವರೋ ಎಂದು ಅನುಮಾನದಿಂದ ಹೆದರಿಕೊಂಡಿದ್ದಾನೆ ಪಾಪ" ಎಂದು ನಂಬುವ ಹಾಗೆ ಬುರುಡೆಬಿಟ್ಟು ಹೇಳಿದ.

ರಾಕ್ಷಸನು ಸಮಾಧಾನದ ಸ್ವರದಿಂದ "ಹಾಗೇನು ! ಅದಕ್ಕಾಗಿ ಹೆದರಿಕೊಂಡಿದ್ದಾನೆಯೆ ? ಪಾಪ, ಆ ಕಳ್ಳರು ಯಾರೋ ? ಅವನ ದಂಡವನ್ನು ಕದ್ದುಕೊಳ್ಳದೆ ಬಿಟ್ಟಿದ್ದಾರಷ್ಟೆ ? ಅವನ ಪುಣ್ಯ ! ಆ ದಂಡ ಕೂಡಾ ಕೈ ತಪ್ಪಿರುತ್ತಿದ್ದರೆ ಅವನನ್ನು ಉಳಿಸಲು ಯಾರಿಗೂ ಸಾಧ್ಯವಿಲ್ಲ. ಹುಂ, ಇನ್ನು ನಾನು ಹೋಗಿ ಬರಬೇಕಾಗಿದೆ. ಅವನು ಕೇಳಿದುದನ್ನು



ಹಾಗೆಲ್ಲ ನಿಮ್ಮ ಹತ್ತಿರಕೊಟ್ಟು ಕಳುಹಿಸಿಬಿಡಲು ಸಾಧ್ಯವಿಲ್ಲ. ನಾನು ಬರುವವರೆಗೆ ಇಲ್ಲೇ ಕಾದಿರಿ. ಒಂದು ಹುಳವನ್ನು ಕೂಡಾ ಒಳಕ್ಕೆ ಬಿಡಬೇಡಿ. ಜಾಗ್ರತೆ!" ಎಂದು ಹೇಳಿ ಇಬ್ಬರನ್ನೂ ಕೆಳಗಿಳಿಸಿ ರಾಕ್ಷಸನು ದೊಡ್ಡ ದೊಡ್ಡ ಹಜ್ಜೆಯಿಡುತ್ತಾ ದೂರ ದೂರ ಹೊರಟುಹೋದನು.

ನಾಲ್ಕು ಹಜ್ಜೆಗಳಲ್ಲೇ ಅಷ್ಟು ದೂರ ಹೋದ ರಾಕ್ಷಸನು ಕಣ್ಮರೆಯಾಗಿಬಿಟ್ಟ. ಸಂಧ್ಯಾ ನಿಶೀಥರು ಸಂತೋಷದಿಂದ ಹಾರಿ ಕುಣಿದರು. ಅಷ್ಟು ದೊಡ್ಡ ತಲೆಯ ರಾಕ್ಷಸನನ್ನು ಮೋಸ ಪಡಿಸಿದೆವೆಂದು ಅವರಿಗೆ ಹೆಮ್ಮೆಯೂ ಬಂದಿತು. "ನಾವೀಗ ತಡ ಮಾಡಬಾರದು. ಅವನು ಬೇಗನೆ ಹಿಂದಿರುಗಿಬರಲೂ ಬಹುದು. ಅವನು ಬರುವುದರೊಳಗೆ ಈ ಮಹಾ ಭವನದ ರಹಸ್ಯಗಳನ್ನೆಲ್ಲ ತಿಳಿದುಬಿಡಬೇಕು, ನಡೆ" ಎಂದು ನಿಶೀಥ ಕೂಡಲೇ ಹೊರಡಲು, ಸಂಧ್ಯಾನೂ ಅವನನ್ನನು ಸರಿಸಿದ.

ಅಣ್ಣ ತಮ್ಮಂದಿರು ಮುಂದೆ ಸಾಗುತ್ತ ಮತ್ತೆ ಹಲವು ದ್ವಾರಗಳನ್ನು ದಾಟಿದರು. ಕೊನೆಯ ದ್ವಾರವನ್ನು ದಾಟಿದ ಕೂಡಲೇ ಅವರಿಗೊಂದು ದೊಡ್ಡ ಕೊಳವು ಕಾಣಿಸಿತು.

ಅದರಲ್ಲಿ ಸುಂದರವಾದ ಹಂಸಗಳು ತೇಲಾಡಿಕೊಂಡಿದ್ದುವು. ಅದರ ನಿರ್ಮಲವಾದ ನೀರನ್ನು ನೋಡಿದ ಕೂಡಲೇ ಸಹೋದರರಿಗೆ ತಮ್ಮ ದಾಹದ ನೆನಪಾಯಿತು. ಮೊದಲು ಸಂಧ್ಯಾನು ಆತುರದಿಂದ ಕೊಳಕ್ಕಿಳಿದು ಒಂದು ಬೊಗಸೆ ನೀರು ತೆಗೆದು ಕುಡಿದ. ಆ ಕೂಡಲೇ ತನಗೇನೋ ಆಗುವಂತೆ ತೋರಿ ಹೆದರುತ್ತ ತಟಕ್ಕನೆ ಮೇಲಕ್ಕೆ ಹಾರಿ ಬಂದು ಶಿಲೆಯಾಗಿ ನಿಂತುಬಿಟ್ಟ.

"ಅಯ್ಯೋ" ಎಂದು ಚೀರಿದ ನಿಶೀಥ. ತನ್ನ ಕಣ್ಣೆದುರಿನಲ್ಲಿಯೇ ಸಹೋದರನು ಶಿಲೆಯಾದುದನ್ನು ನೋಡಿ ವಿಗ್ರಹದಂತೆ ನಿಂತುಬಿಟ್ಟ ನಿಶೀಥ. "ಅವನೊಂದಿಗೇ ನಾನು ಕೂಡಾ ನೀರು ಕುಡಿದಿದ್ದರೆ ಶಿಲೆಯಾಗಿ ಬಿಡುತ್ತಿದ್ದೆ. ನಾನೊಬ್ಬ ಉಳಿದದ್ದು ದೇವರ ದಯೆ! ನಿವೃತ್ತಿ ಮಾರ್ಗ ಹುಡುಕಲು ಒಬ್ಬ ನಿದ್ದೇನೆಂದಾಯಿತು. ಉದಯನನ ಗತಿ ಹಾಗಾಯಿತು. ಅದನ್ನು ತಿಳಿಯುವುದರೊಳಗೆ ಇವನ ಗತಿ ಹೀಗಾಯಿತು. ನನಗೂ ಹೀಗೇನಾದರೂ ಆಗಿ ಬಿಟ್ಟಿದ್ದರೆ ಲೋಕಕ್ಕೆ ಯಾವುದೂ ತಿಳಿಯದಂತಾಗಿ ಬಿಡುತ್ತಿತ್ತು. ಅಬ್ಬಾ! ಎಷ್ಟು ಎಚ್ಚರಿಕೆಯಿಂದಿದ್ದರೂ ಸಾಲದೆಂಬುದಕ್ಕೆ ಇದೆಲ್ಲ ಪಾಠವಾಯಿತು. ಇನ್ನೇನು ಬರುವುದೋ, ದೇವರೆ!" ಎಂದು ಅನೇಕ ವಿಧವಾಗಿ ಚಿಂತಿಸಿದನು ನಿಶೀಥ.

ಯೋಚಿಸುತ್ತಾ ನಿಶೀಥನು ಮುಂದಕ್ಕೆ ನಡೆದ. ಮರಗಿಡಗಳಿಂದ ತುಂಬಿದ ತೋಟವೊಂದು ಅವನ ಕಣ್ಣು ಸೆಳೆಯಿತು. ಅಲ್ಲಿ ಬಗೆಬಗೆಯ ಫಲವೃಕ್ಷಗಳು ತುಂಬಿದ್ದುವು. ಎಲ್ಲಕ್ಕೂ ಹೆಚ್ಚಿನ ಆಕರ್ಷಣೆಯಿಂದಿದ್ದ ಮಾವಿನ ಮರದಬಳಿಗೆ ನಿಶೀಥನು ಹೋಗಿ ನೋಡಿದ.



ಎಷ್ಟೊಂದು ಮಾವಿನ ಹಣ್ಣುಗಳು! ಎಲೆಗಳಿಗಿಂತಲೂ ಹೆಚ್ಚಾಗಿ ಹಣ್ಣುಗಳು ತುಂಬಿವೆ. ಅವುಗಳ ಬಂಗಾರದ ರಂಗಿಗೂ ಸುವಾಸನೆಗೂ ಅವನ ನಾಲಿಗೆಯಲ್ಲಿ ನೀರಿಳಿಯಿತು. ಹಸಿವೆಯೂ ಆಗಿತ್ತು. ಕೆಲವು ಹಣ್ಣುಗಳನ್ನು ಕೊಯಿದು ತನ್ನ ಮುಂದೆ ಹಾಕಿಕೊಂಡನು. ಬಳಿಕ ಒಂದು ಹಣ್ಣನ್ನು ತೆಗೆದು ಕಚ್ಚಿದ್ದೇ ತಡ, ಒಂದು ಕೋತಿಯಾಗಿ ಹಾರಿಬಿದ್ದ. "ಅಯ್ಯೋ! ಇದೇನು ರಾಕ್ಷಸ ಮಾಯೆಯೋ ಮಾರೀಚ ಮಾಯೆಯೋ! ಇನ್ನೇನೇನು ಅನುಭವಿಸ ಬೇಕಾಗುವುದೋ" ಎಂದು ತನ್ನೊಳಗೇ ಕೊರಗುತ್ತ, ಆ ಹಣ್ಣುಗಳನ್ನೆಲ್ಲಾ ಆಚೆಗೆ ದೂಡಿಬಿಟ್ಟ.

ಆ ಮೇಲೆ ಏನು ಮಾಡಬೇಕೆಂದು ತೋರದೆ ಅಲ್ಲಿ ಇಲ್ಲಿ ತಿರುಗುತ್ತಾ, ಕೊಳದಬಳಿಗೇ ಬಂದು, ಶಿಲಾ ರೂಪ ತಳೆದ ತನ್ನ ಸೋದರನ ಸುತ್ತಲೂ ಮಿಳಿಮಿಳಿ ನೋಡುತ್ತ, ತಿರುಗ ತೊಡಗಿದ. ಆಗ ಕೊಳದೊಳಗಿನಿಂದ ಏನೋ ಗುಳುಗುಳು ಶಬ್ದ ಕೇಳಿತು.

ಅದೇನೆಂದು ಕೋತಿ ರೂಪದ ನಿಶೀಥನು ದಿಗಿಲಿನಿಂದ ನೋಡುತ್ತಿರಲು, ಒಂದು ಹಂಸ ಕೊಳದ ಬದಿಗೆ ತೇಲುತ್ತಾ ಬಂದು, ತೀರಕ್ಕೆ ಹತ್ತಿ ಬರುತ್ತ ಮನುಷ್ಯನಾಗಿ ನಿಂತಿತು.

ಆ ಮನುಷ್ಯನನ್ನು ನೋಡಿದ ಕೂಡಲೇ ಕೋತಿ ನಿಶೀಥ ಹಾರಿಬಿದ್ದ. ಏಕೆಂದರೆ ಹಾಗೆ ನಿಂತಿರುವವನು ಮಾಯವಾಗಿ ಹೋದ ತನ್ನ ಪ್ರಿಯ ಸಹೋದರನಾದ ಉದಯನನೇ! ಈಗ ಕೋತಿಯಾಗಿರುವವನು ನಿನ್ನ ಸಹೋದರನೇ ಎಂದು ಅವನಿಗೆ ಹೇಗೆ ತಿಳಿಸುವುದು?

ಉದಯನನು ಮನುಷ್ಯ ರೂಪವನ್ನು ತಾಳಿ, ಪಕ್ಕದಲ್ಲಿರುವ ಸಂಧ್ಯಾನ ಶಿಲಾಪ್ರತಿಮೆಯನ್ನು ನೋಡಿ ಸ್ತಂಭೀಭೂತನಾಗಿ ನಿಂತಿದ್ದಾನೆ. ಆಗ ಕೋತಿ ರೂಪದ ನಿಶೀಥನು ಉದಯನನಬಳಿಗೆ ಬಂದು ಎಗರುತ್ತ ಅವನ ಕಾಲುಗಳನು ಸುತ್ತುತ್ತ ಚೇಷ್ಟೆ ಮಾಡ ತೊಡಗಿದನು.

ಇದು ಯಾವುದೋ ಕಾಡು ಕೋತಿ ಎಂದು ಕೊಂಡು ಉದಯನ ಅದನ್ನು ದೂರ ಓಡಿಸಲು ಹೆದರಿಸಿ ಕೈಕಾಲು ಜಾಡಿಸಿದ. ಆದರೂ ಅದು ಬಿಡದೆ ಮತ್ತೆ ಮತ್ತೆ ತನ್ನಬಳಿಗೇ ಬರುವುದನ್ನು ನೋಡಿ, ಅವನಿಗೆ ಸಂದೇಹವಾಯಿತು. ತನ್ನ ಇನ್ನೊಬ್ಬ ಸೋದರನಾದ ನಿಶೀಥನೇ ಈ ಕೋತಿಯೇನೋ ಎಂದು ಅವನಿಗೆ ತೋರತೊಡಗಿತು. ಅದರ ತಲೆಯನ್ನೂ, ಬೆನ್ನನ್ನೂ ನೇವರಿಸುತ್ತ ಸುಮ್ಮನೆ ನೋಡುತಿದ್ದನೇ ಹೊರತು ಏನು ಮಾಡಬೇಕೆಂದು ಅವನಿಗೆ ತೋರಲಿಲ್ಲ. ಸಂಧ್ಯಾನು ಏಕೆ ಶಿಲಾ ರೂಪದಲ್ಲಿರುವನೋ, ಈ ಕೋತಿ ರೂಪದವನು ತನ್ನ ಸಹೋದರನು ಹೌದೋ ಅಲ್ಲವೋ ಎಂಬುದನ್ನೆಲ್ಲ ಹೇಗೆ ಕಂಡು ಹಿಡಿಯುವುದು?

ಸ್ವಲ್ಪ ಹೊತ್ತು ಆಲೋಚನೆ ಮಾಡಿದ ಮೇಲೆ ಅವನಿಗೆ ಒಂದು ಉಪಾಯವು ಮಿಂಚಿತು. ತನ್ನ

ಜೇಬುಗಳಲ್ಲಿರುವ ಭಸ್ಮ ಅಂಜನಗಳ ನೆನಪಾಯಿತು. ಕೂಡಲೇ ಅವನು ಜೇಬಿನಿಂದ ಕಪ್ಪು ಭಸ್ಮವನ್ನು ತೆಗೆದು ಸಂಧ್ಯಾನ ಶಿಲಾ ವಿಗ್ರಹದ ಮೇಲೆ ಚೆಲ್ಲಿದನು. ಏನೂ ಆಗದಿರಲು, ಅಂಜನವನ್ನು ಹಚ್ಚಿ ನೋಡಿದನು. ಆ ಮೇಲೆ ಹಸಿರು ಅಂಜನವನ್ನೂ, ಕೆಂಪು ಅಂಜನವನ್ನೂ ಹಚ್ಚಿದನು.

ಯಾವುದರಿಂದಲೂ ಏನೂ ಆಗದೆ, ಶಿಲಾ ಪ್ರತಿಮೆ ಇದ್ದ ಹಾಗೆಯೇ ಇದ್ದಿತು. ಶಿಲಾ ವಿಗ್ರದ ಮೇಲೆ ಮಾಡಿದ ಪ್ರಯೋಗಗಳು ನಿಷ್ಫಲವಾದ ಮೇಲೆ, ಅವನು ಆ ಅಂಜನಗಳನ್ನೂ ಭಸ್ಮಗಳನ್ನೂ ಕೋತಿಯ ಮೇಲೆ ಪ್ರಯೋಗಿಸಿ ನೋಡಿದನು. ಅದಕ್ಕೂ ಏನೂ ಆಗಲಿಲ್ಲ. ಕೋತಿ ಕೋತಿಯಾಗಿಯೇ ಇದ್ದಿತು. ಮಹತ್ವವೆನಿಸಿದ ಭಸ್ಮ ಅಂಜನಗಳುಮಾತ್ರ ವ್ಯರ್ಥಾ ನಷ್ಟವಾಗಿ ಹೋದುವು.

ಇನ್ನೇನು ಮಾಡಲಿಕ್ಕೂ ತೋರದೆ ಉದಯನನು ಕೊಳದ ಬದಿಯಲ್ಲಿ ಕುಳಿತುಕೊಂಡು ಆಲೋಚನೆಗೆ ಬಿದ್ದನು. ಆಲೋಚನೆಯಿಂದ ತನ್ನ ಬುದ್ಧಿ ಮಂಕಾಗುವ ಹಾಗೆ ತೋರಿತು.

ಆಗ ಕೊಳದೊಳಗಿನ ಹಂಸಗಳೊಂದು ನೀರಿನಲ್ಲಿಳಿಬಿದ್ದ ಅವನ ಕಾಲುಗಳ ಬಳಿಯಲ್ಲಿಯೇ ಮುಂದೆ ಹೋಯಿತು. ಅದರಿಂದ ಎಚ್ಚೆತ್ತ ಉದಯನನು ತಟಕ್ಕನೆ ಬಾಗಿ ಅದನ್ನು ಮೇಲಕ್ಕೆ ಎತ್ತಿದನು. ಮೇಲಕ್ಕೆ ಬಂದ ಕೂಡಲೇ ಆ ಹಂಸವು ಹಂಸವಾಗಿ ಲಿಲ್ಲ, ಸುಂದರ ಮಾನವ ತರುಣಿಯಾಗಿ ನಿಂತಿದ್ದಳ

ಅವಳು ಉದಯನನ ಮುಂದೆ ಮಾತಾಡ ನಾಚಿಗೆಯಿಂದ ತಲೆತಗ್ಗಿಸಿ ನಿಂತಿದ್ದಳು. ಅವಳನ ನೋಡಿ ಉದಯನನು ತನಗಾದ ಆಶ್ಚರ್ಯವನ ಹತ್ತೊತ್ತಿಕೊಂಡು, "ನೀನು ಯಾರು? ಹೀ ಹಂಸದ ರೂಪದಲ್ಲಿ ಈ ಕೊಳದಲ್ಲಿರುವ ಕಾರ ವೇನು? ಇದನ್ನೆಲ್ಲಾ..." ಎನ್ನುವಷ್ಟರಲ್ಲಿ "ಎ ಹೋದಿರೋ ಹುಡುಗರೇ!" ಎಂದು ಸಿಡಿಲಿನಂತ ಶಬ್ದ ಕೇಳಿಸಿತು.

ಅದು ಕಿವಿಗೆ ಬಿದ್ದ ಕೂಡಲೇ ಆ ಕನ್ಯೆ ಭೀತಿಯಿಂ "ಅಯ್ಯೋ! ಬಂದನಲ್ಲಾ ಕಾವಲುಗಾರ ರಕ್ಕಸ! ಎಂದು ತನ್ನ ಬಾಯಿಗೆ ಕೈಯಿಟ್ಟು, ಮಾತಾ ಬೇಡವೆಂದು ಉದಯನನಿಗೆ ಸೂಚಿಸಿ, ಪಿಸುದ ಯಿಂದ "ಅದನ್ನೆಲ್ಲ ಆಮೇಲೆ ಹೇಳುತ್ತೇನೆ. ಈ ಪ್ರಾಣರಕ್ಷಣೆ ಮುಖ್ಯ!" ಎಂದು ಹೇಳುತ್ತ, ಸಂಧ್ಯಾ ಶಿಲಾ ವಿಗ್ರಹವನ್ನೂ, ಅದರ ಹತ್ತಿರವಿದ್ದ ಕೋ ಯನ್ನೂ ಕೊಳದೊಳಗೆ ದೂಡಿಬಿಟ್ಟಳು. ಆ ಕ್ಷಣ ಅವೆರಡೂ ಹಂಸಗಳಾಗಿ ಬದಲಾಯಿಸಿದುವ ಆಮೇಲೆ ಅವಳು ಉದಯನನ ಕೈಯನ್ನು ಹಿಡಿ ಎಳೆದುಕೊಂಡೇ ಕೊಳಕ್ಕೆ ಹಾರಿದಳು. ಅವರಿಬ್ಬರ ಹಂಸಗಳಾಗಿದರು.

(ಇನ್ನೂ ಇದ






# ವೀರಹನುಮಾನ್

ಸುಗ್ರೀವನು ಗಜಪುಷ್ಪಿಲತೆಯನ್ನು ಕೊರಳಿಗೆ ಸುತ್ತಿಕೊಂಡು ರಾಮನ ಜತೆಯಲ್ಲಿ ಕಿಷ್ಕಿಂಧೆಯ ಕಡೆಗೆ ಹೊರಟನು. ಮುಂದಿನಿಂದ ಸುಗ್ರೀವನು ಹೋಗುತ್ತಿದ್ದನು. ಅವನ ಹಿಂದೆ ಧನುರ್ಬಾಣಗಳೊಂದಿಗೆ ರಾಮನೂ ಲಕ್ಷ್ಮಣನೂ ನಡೆಯುತ್ತಿದ್ದರು. ಅವರ ಹಿಂದೆ ವೀರನಾದ ಹನುಮಂತನೂ, ನಳನೂ ನೀಲನೂ, ತಾರನೂ ನಡೆಯುತ್ತಿದ್ದರು. ಈ ಸಾರಿ ಸುಗ್ರೀವನು ರಾಮನ ಮೇಲೆ ಪೂರ್ಣ ವಿಶ್ವಾಸವಿಟ್ಟು ತುಂಬ ಉತ್ಸಾಹದಿಂದಿದ್ದನು. ಇನ್ನು ಋಷ್ಯಮೂಕ ಪರ್ವತ ಗುಹೆಗಳವಾಸ ತಪ್ಪಿದಂತೆಯೇ ಸಂತೋಷವಾಗಿದ್ದನು.

ಹೋಗುವ ದಾರಿಯಲ್ಲಿ ಕಪ್ಪಾಗಿರುದ ಮರಗಳಿಂದ ನಿಬಿಡವಾದ ದೊಡ್ಡದೊಂದು ಅರಣ್ಯವು ಕಾಣಿಸಿತು. ಅದನ್ನು ನೋಡಿ ರಾಮನು ಅದು ಎಂತಹ ಅರಣ್ಯವೆಂದು ಸುಗ್ರೀವನನ್ನು ಕೇಳಿದನು.

ನಡೆಯುತ್ತಾ ಸುಗ್ರೀವನು ಆ ಅರಣ್ಯದ ವಿಷಯ ಹೇಳಿದನು. ಅದೇನೆಂದರೆ, "ಹಿಂದಿನ ಕಾಲದಲ್ಲಿ ಅದೊಂದು ಶಾಂತವಾದ ಋಷ್ಯಾಶ್ರಮವಾಗಿತ್ತು. ತಣ್ಣಗಿನ ನೆರಳನ್ನೀಯುವ ಮರಗಳಿಂದ, ರುಚಿಯಾದ ಕಂದ ಮೂಲ ಫಲಗಳಿಂದ ಆಹ್ಲಾದಕರವಾಗಿತ್ತು. ಅಲ್ಲಿ ಸಪ್ತಜನರೆಂಬ ಋಷಿಗಳು ತಪಸ್ಸು ಮಾಡಿ, ಮರ್ತ್ಯ ಶರೀರದೊಂದಿಗೆ ಸ್ವರ್ಗಕ್ಕೆ ಹೋಗಿದ್ದಾರೆ. ಈಗ ಅದರೊಳಗೆ ಪ್ರವೇಶ ಮಾಡಲು ಯಾರಿಗೂ ಸಾಧ್ಯವಿಲ್ಲ. ಪಕ್ಷಿಗಳೂ, ಇತರ ಯಾವ ಪ್ರಾಣಿಗಳೂ ಆ ಕಾಡಿನೊಳಗೆ ಹೋಗುವುದಿಲ್ಲ. ಅಪ್ಪಿತಪ್ಪಿ ಒಳಗೆ ಪ್ರವೇಶ ಮಾಡಿದ ಪ್ರಾಣಿಗಳು ಹಿಂದಿರುಗಿ ಹೊರಗೆ ಬರಲಾರವು. ಈಗ ಈ ಅರಣ್ಯದೊಳಗಿನಿಂದ ಆಗಾಗ ಅಪ್ಸರಸಿಯರು ನಾಟ್ಯವಾಡುವ ನಿನಾದ ಕೇಳಿ ಬರುತ್ತದೆ. ಒಂದೊಂದು ಸಾರಿ ಅವರು ಸುಶ್ರಾವ್ಯವಾಗಿ ಹಾಡುತ್ತಾರೆ. ಆ ಸಮಯದಲ್ಲಿ ಅರಣ್ಯದ ಸುತ್ತಲೂ ಸುವಾಸನೆ ಹರಡುತ್ತದೆ. ಮರಗಳ ಮೇಲು ಭಾಗದಲ್ಲಿ ಯಾವಾಗಲೂ ಕರ್ರಗಾಗಿ ಮಸಿ ಕೂಡಿಕೊಳ್ಳುತ್ತದೆ. ಅದಕ್ಕೆ ಕಾರಣವೇನೆಂದರೆ ಈ ಅರಣ್ಯದೊಳಗೆ ಸದಾ ಕಾಲವೂ ತ್ರೇತಾಗ್ನಿಗಳು ಬೆಳಗಿಕೊಂಡಿರುತ್ತವೆ"

ಸುಗ್ರೀವನ ಮುಖದಿಂದ ಆ ವನದ ಮಹತ್ತ್ವವನ್ನು ಕೇಳಿ ರಾಮಲಕ್ಷ್ಮಣರು ಸಪ್ತಜನ ಋಷಿಗಳನ್ನು ನೆನೆದು ಆ ಅರಣ್ಯಕ್ಕೆ ನಮಸ್ಕಾರ ಮಾಡಿದರು. ಆ ಪ್ರದೇಶದಿಂದ ಬಹಳದೂರ ನಡೆದ ಮೇಲೆ, ಕಿಷ್ಕಿಂಧೆ ಸಮೀಪವಾಯಿತು. ಆಮೇಲೆ ರಾಮಲಕ್ಷ್ಮಣರು ಮರಗಳ ಮರೆಯಲ್ಲಿ ಅಡಗಿಕೊಂಡರು.

ಸುಗ್ರೀವನು ಸಾಕಷ್ಟು ಮುಂದೆ ಹೋಗುತ್ತ ಸುತ್ತಲೂ ಕತ್ತು ತಿರುಗಿಸಿ ನೋಡುತ್ತ, ದಿಕ್ಕುಗಳು ಭೇದಿಸುವಂತೆ ಗರ್ಜಿಸುತ್ತ ವಾಲಿಯನ್ನು ಯುದ್ಧಕ್ಕೆ ಬರುವಂತೆ ಕರೆದನು. ಹಾಗೆಯೇ ರಾಮನನ್ನು ನೋಡಿ, "ಈ ಸಾರಿ ನಿನ್ನ ಮಾತನ್ನು ನಡೆಯಿಸದೆ ಬಿಡಬೇಡ" ಎಂದು ಕೇಳಿಕೊಂಡನು.

ರಾಮನು ಅವನನ್ನು ಕುರಿತು, "ಈ ಸಾರಿ ತಪ್ಪುವುದಿಲ್ಲ. ನಿನ್ನ ಕೊರಳಿನಲ್ಲಿ ಗಜಪುಷ್ಪಲತೆಯಿರುವುದರಿಂದ ನಿನ್ನನ್ನು ಸುಲಭವಾಗಿ ಗುರುತಿಸಬಲ್ಲೆ. ಒಂದೇ ಬಾಣದಿಂದ ನಾನು ವಾಲಿಯನ್ನು ನೆಲಕ್ಕೆ ಒರಗಿಸುತ್ತೇನೆ. ಮತ್ತೆ ಎಂದೂ ಅವನು ಏಳಲಾರನು. ನೀನು ಹೆದರಬೇಡ. ನಾನು ಎಂತಹ ಕಷ್ಟದಲ್ಲಿದ್ದರೂ ಸುಳ್ಳಾಡಲಾರೆ. ವ್ಯರ್ಥ ಮಾತು ನನ್ನ ಬಾಯಿಯಿಂದ ಬಾರದು. ಈ ಮಾತು ತ್ರಿಕಾಲ ಸತ್ಯವೆಂದು ನಂಬಿ. ನೀನು ನಿಶ್ಚಿಂತೆಯಿಂದ ವಾಲಿಯನ್ನು ಕರೆ" ಎಂದನು.

ಸುಗ್ರೀವನು ಆಕಾಶ ಪಾತಾಳಗಳೊಂದಾಗುವಂತೆ ಭಯಂಕರವಾಗಿ ಗರ್ಜಿಸಿದನು. ಆ ಕರ್ಕಶ ಧ್ವನಿಯನ್ನು ಕೇಳಿ ಪಶುಪಕ್ಷಿಗಳು ಬೆದರಿದುವು. ವನದೊಳಗೆ ತಿರುಗುವ ಜಿಂಕೆಗಳು ಗೊಂಬೆಗಳ ಹಾಗೆ ಅಲ್ಲಲ್ಲೇ ನಿಂತುಬಿಟ್ಟುವು.

ಸುಗ್ರೀವನ ಸಿಂಹನಾದವು ಅಂತಃಪುರದಲ್ಲಿದ್ದ ವಾಲಿಯ ಕಿವಿಗೆ ಮುಟ್ಟಿತು. ತನ್ನ ಹೆಸರು ಕೇಳಿದರೆ ನಡುಗುವವನಾದ ಸುಗ್ರೀವನು ಅಷ್ಟೊಂದು ಗರ್ವದಿಂದ ಅರಚುವನೇ ? ತನ್ನ ಮನೆಯ ಹತ್ತಿರ ಬಂದು ಹೀಗೆ ಕೂಗುವಷ್ಟು ಧೈರ್ಯವೇ ಅವನಿಗೆ ? ಎಂದುಕೊಳ್ಳುತ್ತ ವಾಲಿಗೆ ತಾಳಲಾರದಷ್ಟು ಸಿಟ್ಟು ಬಂತು. ಅವನು ಕೂಡಲೇ ಎದ್ದು ಯುದ್ಧಕ್ಕೆ ಹೊರಟನು.



ಆಗ ಅವನ ಪತ್ನಿ ತಾರೆ ಅವನ ಕೈಹಿಡಿದು ತಡೆಯುತ್ತ, "ಆ ಸುಗ್ರೀವನನ್ನು ಕೊಲ್ಲಲಿಕ್ಕೆ ಈ ರಾತ್ರಿಯ ಹೊತ್ತಿನಲ್ಲೇ ಹೋಗಬೇಕೇನು ? ಬೆಳಗಾದ ಮೇಲೆ ಹೋದರಾಯಿತು. ಅಷ್ಟರವರೆಗೆ ಅವನು ಬೇಕಾದರೆ ಕೂಗಿಕೊಂಡಿರಲಿ. ಇದರಲ್ಲಿ ಪೌರುಷದ ಪ್ರಸಕ್ತಿಯೇನಿಲ್ಲ. ಏಕೆಂದರೆ ಅವನು ನಿನಗೆ ಸಮಾನನಾದ ಬಲಶಾಲಿಯಲ್ಲ. ಈಗಲೇ ಅವಸರಪಟ್ಟು ಅವನೊಂದಿಗೆ ಯುದ್ಧಕ್ಕೆ ಹೋಗಬೇಡವೆಂದು ನಾನು ಏಕೆ ಹೇಳುತ್ತೇನೆ ಗೊತ್ತೇ ? ಒಂದುಸಾರಿ ನಿನ್ನ ಮುಷ್ಟಿಯಲ್ಲಿ ಸಾಯುವ ಹಾಗೆ ಏಟು ತಿಂದು ಓಡಿದವನು, ಮತ್ತೆ ನಿನ್ನ ಮೇಲೆ ಯುದ್ಧಕ್ಕೆ ಏರಿಬರುವನೆಂದರೆ ಅವನಿಗೆ ಯಾರದೋ ಸಹಾಯವಿರಬೇಕು. ಇಲ್ಲದಿದ್ದರೆ ಅವನು ಹೀಗೆ ಬರಲಾರ. ಅವನಿಗೆ ಯಾರ ಸಹಾಯವಿದ್ದರೂ ಚಿಂತೆಯಿಲ್ಲ, ನಾನು ಕೊಲ್ಲಬಲ್ಲೆನೆಂದು ಭಾವಿಸಿಬಿಡಬೇಡ. ಸುಗ್ರೀವನು ಬುದ್ಧಿವಂತ. ತನಗೆ ಸಹಾಯ ಮಾಡುವವರ ಶಕ್ತಿ ಸಾಮರ್ಥ್ಯಗಳನ್ನು ಚೆನ್ನಾಗಿ ಪರೀಕ್ಷೆ ಮಾಡಿಯೇ ಧೈರ್ಯದಿಂದ ಬಂದಿದ್ದಾನೆ. ನಿನ್ನ ಶಕ್ತಿಯೂ ಅವನಿಗೆ ಗೊತ್ತು. ಆದುದರಿಂದ ನಿನಗಿಂತ ಹೆಚ್ಚು ಪರಾಕ್ರಮವಂತನ ಸಹಾಯವನ್ನು ತೆಗೆದುಕೊಂಡೇ ಅವನು ಬಂದಿರಬೇಕು. ಅಂಗದನು ಅರಣ್ಯ ಪ್ರಾಂತದಲ್ಲಿ ತಿರುಗಾಡಿ ಬಂದು ಒಂದು ಸಮಾಚಾರ ತಂದಿದ್ದಾನೆ. ಇಕ್ಷ್ವಾಕು ವಂಶದವರಾಗಿ, ದಶರಥ ಮಹಾರಾಜನ ಪುತ್ರರಾದ ರಾಮಲಕ್ಷ್ಮಣರೆಂಬವರು ಋಷ್ಯಮೂಕ ಪರ್ವತದ ಮೇಲೆ ಹೋದರಂತೆ. ಅಸಮಾನ ಬಲ ಪರಾಕ್ರಮ ಸಂಪನ್ನರಾದ ಆ ಅಣ್ಣತಮ್ಮಂದಿರು ಸುಗ್ರೀವನಿಗೆ ಸಹಾಯಕರಾಗಿದ್ದಾರಂತೆ. ಆ ರಾಮನು ವಿರಾಧನನ್ನೂ, ಖರದೂಷಣರನ್ನೂ, ಕಬಂಧನನ್ನೂ ಕೊಂದಿರುವನಂತೆ. ಅವರ ಶಕ್ತಿ ಸಾಮರ್ಥ್ಯಗಳಿಗೆ ಪ್ರಪಂಚದಲ್ಲಿ ಯಾರೂ ಇದಿರಿಲ್ಲವಂತೆ" ಎಂದಳು.

ಹೀಗೆ ಹೇಳುತ್ತ ತಾರೆ ವಾಲಿಗೆ ಈ ವಿಧವಾಗಿ ಆಲೋಚನೆ ಕೂಡಾ ಹೇಳತೊಡಗಿದಳು:

"ಈ ಸಂದರ್ಭದಲ್ಲಿ ರಾಮನೊಂದಿಗೆ ವಿರೋಧ ತಂದುಕೊಳ್ಳುವುದಕ್ಕಿಂತ ಸುಗ್ರೀವನೊಂದಿಗೆ ರಾಜ





ಮಾಡಿಕೊಂಡು ಸ್ನೇಹದಿಂದಿರುವುದು ಲೇಸು. ಅವನನ್ನು ಕರೆದು ಮತ್ತೆ ಯುವರಾಜನನ್ನಾಗಿ ಮಾಡಿಬಿಡು. ಅವನು ನಿನ್ನ ಸಹೋದರನೇ ಹೊರತು ಪರಕೀಯನಲ್ಲವಷ್ಟೆ? ನಿನಗೆ ಒಳಿತಾಗಬೇಕೆಂಬ ಕೋರಿಕೆಯಿಂದಲೇ ನಾನು ಈ ಮಾತು ಹೇಳುತ್ತಿದ್ದೇನೆ. ನಿನ್ನ ಶಕ್ತಿ ಸಾಮರ್ಥ್ಯಗಳನ್ನು ಕಡಮೆ ಮಾಡಲಿಕ್ಕಲ್ಲ" ಎಂದಳು.

ಆದರೆ ತಾರೆಯ ಮಾತುಗಳಾವುದೂ ವಾಲಿಗೆ ರುಚಿಸಲಿಲ್ಲ. ಅವನು ತುಸು ನಿಂತು ತಾರೆಗೆ ಹೀಗೆ ಸಮಾಧಾನ ಹೇಳಿದನು:

"ನನ್ನನ್ನು ತಡೆಯಬೇಡ. ಕ್ಷುದ್ರನಾದ ಸುಗ್ರೀವನು ಆ ಕಡೆಯಲ್ಲಿ ನಿಂತು ನನ್ನನ್ನು ಯುದ್ಧಕ್ಕೆ ಕರೆಯುವಾಗ ನಾನು ಸಹಿಸಿಕೊಂಡಿರಬೇಕೆ? ಅಂಜುಕುಳಿಯಾದ ನಿನಗೆ ಯಾವುದೂ ಗೊತ್ತಾಗುವುದಿಲ್ಲ. ಮಹಾಶೂರರಿಗೆ ಯುದ್ಧದ ಮನಸ್ಸನ್ನು ಹಿಂದಿರುಗಿಸುವುದೂ ಸಾಯುವುದೂ ಸಮಾನವೆಂದು ತಿಳಿ. ರಾಮನನ್ನು ಕುರಿತು ನೀನೇನೂ ಹೆದರಬೇಡ. ಅವನು ನಿರಪರಾಧಿಯಾದ ನನ್ನನ್ನು ಕೊಂದು ಪಾಪ ಕಟ್ಟಿಕೊಳ್ಳಲಾರ. ಅವನಿಗೂ ನನಗೂ ಯಾವ ಹಗೆಯೂ ಇಲ್ಲ; ವ್ಯವಹಾರವೂ ಇಲ್ಲ. ನೀನು ನನ್ನ ಒಳಿತಿಗಾಗಿ ಹೇಳುವುದನ್ನು ಹೇಳಿದೆ. ಸಂತೋಷ. ಇನ್ನು ಸುಮ್ಮನಿರು. ನನ್ನೊಂದಿಗೆ ಬರುವುದೂ ಬೇಡ. ನಾನು ಸುಗ್ರೀವನ ಗರ್ವವನ್ನು ಅಡಗಿಸುತ್ತೇ ನೆಯೇ ಹೊರತು, ಕೊಲ್ಲುವೆನೆಂದು ತಿಳಿಯಬೇಡ. ನನ್ನ ಏಟುಗಳನ್ನು ತಾಳಲಾಗದೆ ಅವನೇ ಓ ಹೋಗುತ್ತಾನೆ."

ಇನ್ನು ಹೇಳಿ ಪ್ರಯೋಜನವಿಲ್ಲವೆಂದು ತಾರೆ ಗೊತ್ತಾದುದರಿಂದ, ಅವಳು ಅವನಿಗೆ ಪ್ರದಕ್ಷಿ ಮಾಡಿ ಯುದ್ಧದಲ್ಲಿ ಜಯವಾಗುವಂತೆ ಇಷ್ಟದೈ ವನ್ನು ಸ್ತೋತ್ರಮಾಡಿ ಹಿಂದಕ್ಕೆ ಹೋದಳು.

ವಾಲಿ ಹೊರಗೆ ಹೋಗಿ ಮುಂದೆ ನಡೆದು ತನ್ನೊಂದಿಗೆ ಯುದ್ಧಕ್ಕೆ ಸಿದ್ಧನಾಗಿ ಕಾಲು ಕೆದರು ರುವ ಸುಗ್ರೀವನನ್ನು ನೋಡಿದನು. ಕೂಡಲೆ ಅವನು ಸುಗ್ರೀವನ ಹಾಗೆಯೇ ದಟ್ಟಬಿಗಿದು ತೋಳು ತಟ್ಟಿ, ಮುಷ್ಟಿಗಳನ್ನು ಹಿಡಿದುಕೊಂಡ ಸುಗ್ರೀವನ ಮೇಲೆ ಏರಿ ಹೋದನು. ಸುಗ್ರೀವನೂ ಮುಷ್ಟಿಗಳಿಂದ ಅವನನ್ನು ಇದಿರಿಸಿದನು. ಇಬ್ಬರಿಗ ಯುದ್ಧ ತೊಡಗಿತು.

ಅವರಿಬ್ಬರೂ ಒಬ್ಬರನ್ನೊಬ್ಬರು ಮುಷ್ಟಿಯಿಂ ಗುದ್ದಿಕೊಂಡರು. ಸುಗ್ರೀವನು ಒಂದು ಸಾಲವೃ ವನ್ನು ಕಿತ್ತು ಅದರಿಂದ ವಾಲಿಯನ್ನು ಹೊಡೆದನ ಆ ಪೆಟ್ಟಿನ ರಭಸ ವಾಲಿಯನ್ನು ಸ್ವಲ್ಪ ಸ್ತಬ್ಧ ಗೊಳಿಸಿತು. ಆಮೇಲೆ ಕ್ರಮವಾಗಿ ವಾಲಿ ವಿಜೃಂಭಣೆ ಹೆಚ್ಚಾಯಿತು. ಸುಗ್ರೀವನ ಬಲ ತಗ್ಗಿ

ಹೀಗೆ ಇಬ್ಬರ ನಿಜ ಶೌರ್ಯ ಪ್ರದರ್ಶನ ಸಾಕಷ್ಟು ಅವಕಾಶ ಕೊಟ್ಟ ಮೇಲೆ, ಸುಗ್ರೀವ ಸೋಲುವ ಸೂಚನೆ ಕಂಡು ಬಂದು ದಿಕ್ಕುಗಳ



ನೋಡುವುದನ್ನು ರಾಮನು ನೋಡಿ, ತನ್ನ ಧನುಸ್ಸನ್ನು ಎತ್ತಿದನು. ವಾಲಿಯನ್ನು ಕೊಲ್ಲಲು ತಕ್ಕುದಾದ ಒಂದು ಬಾಣವನ್ನು ಆರಿಸಿಕೊಂಡು ಧನುಸ್ಸಿಗೆ ಹೂಡಿ ಗುರಿನೋಡಿ ಕಿವಿಯವರೆಗೆ ನಾಣೆಳೆದು ಆ ಬಾಣವನ್ನು ಬಿಟ್ಟನು. ಅದು ಬಿರುಗಾಳಿಯ ಸದ್ದಿನೊಂದಿಗೆ ಹೋಗಿ ವಾಲಿಯ ಎದೆಯನ್ನು ಚುಚ್ಚಿಕೊಂಡಿತು. ಅದರ ಹೊಡೆತದಿಂದ ವಾಲಿ ಮರಗಟ್ಟಿದಂತಾಗಿ ನೆಲಕ್ಕೆ ಬಿದ್ದನು.

ಇಂದ್ರನು ಪ್ರಸಾದಿಸಿದ ಕಾಂಚನಮಾಲೆ ವಾಲಿಯ ಕಂಠದಲ್ಲಿದ್ದ ಕಾರಣದಿಂದ ವಾಲಿಯ ಪ್ರಾಣ ಕೂಡಲೇ ಹೋಗಲಿಲ್ಲ. ಏಳಲಾಗದೆ ಬಿದ್ದಿದ್ದ ಅವನು ತನ್ನನ್ನು ಹೊಡೆದವನಾರೆಂದು ಸುತ್ತಲೂ ಕಣ್ಣು ಹೊರಳಿಸಿಕೊಂಡಿರಲು, ಲಕ್ಷ್ಮಣನೊಂದಿಗೆ ರಾಮನೇ ಅವನ ಬಳಿಗೆ ಬರುತ್ತಿದ್ದನು. ಅವನು ಸಮೀಪ ಬಂದ ಕೂಡಲೇ ವಾಲಿ ಅವನನ್ನು ನೋಡಿ ಗುರುತಿಸಿ ಹೀಗೆ ಹೇಳತೊಡಗಿದನು:

"ರಾಮಾ, ನೀನು ದಶರಥನ ಮಗನಾಗಿ, ಮಹಾ ಗುಣವಂತನೆಂಬ ಕೀರ್ತಿಯನ್ನು ಪಡೆದವನಾಗಿ, ಶಾಸ್ತ್ರಗಳನ್ನೆಲ್ಲ ತಿಳಿದುಕೊಂಡವನಾಗಿ, ಕ್ಷತ್ರಿಯ ವಂಶದಲ್ಲಿ ಹುಟ್ಟಿದ ಮಹಾ ಪರಾಕ್ರಮಶಾಲಿಯಾಗಿ ಏನು ಕಾರ್ಯ ಮಾಡಿಬಿಟ್ಟೆ? ನಾನು ಮತ್ತೊಬ್ಬನೊಂದಿಗೆ ಯುದ್ಧ ಮಾಡಿಕೊಂಡಿರುವಾಗ ನನ್ನ ಎದೆಗೆ ಬಾಣ ಹೊಡೆದುದರಿಂದ ನಿನಗೆಂತಹ ದೊಡ್ಡತನ ಬಂತೆಂದು ಯೋಚಿಸಿದೆಯಾ? ನೀನು ಹೀಗೆ ಮರೆಯಲ್ಲಿದ್ದು ಹೊಂಚು ಹಾಕಿ ನನ್ನನ್ನು ಹೊಡೆಯುವೆಯೆಂದು ನನಗೆ ತಿಳಿಯಲಿಲ್ಲ. ರಾಜರಿಗೆ ಅಗತ್ಯವಾಗಿರಬೇಕಾದ ಇಂದ್ರಿಯ ನಿಗ್ರಹ, ಚಿತ್ತಶುದ್ಧಿ, ಸಹನೆ, ಸತ್ಯ, ಧರ್ಮ ಪರಾಕ್ರಮ, ದುಷ್ಟ ಶಿಕ್ಷಣ ಇವೆಲ್ಲಾ ನಿನ್ನಲ್ಲಿರುತ್ತವೆಂದು ನಂಬಿ, ತಾರೆ ಬೇಡಬೇಡವೆಂದರೂ ಕೇಳದೆ ಯುದ್ಧಕ್ಕೆ ಬಂದೆ. ನೀನು ದುರ್ಬುದ್ಧಿಯವನೆಂದೂ, ಪಾಪಾಚರಣೆಯವನೆಂದೂ ವಂಚಕನೆಂದೂ ನಾನು ಊಹಿಸಲಾರದೆ ಹೋದೆ. ನಿನಗೋ, ನಿನ್ನ ದೇಶಕ್ಕೋ ನಾನೇನೂ ಕೆಡುಕು ಮಾಡಲಿಲ್ಲ. ನಿನ್ನನ್ನು ಅವಮಾನಪಡಿಸಲೂ ಇಲ್ಲ. ನಾನು ಇನ್ನೊಬ್ಬನೊಡನೆ ಯುದ್ಧ ಮಾಡುತ್ತಿದ್ದಾಗ ನೀನು ನನ್ನನ್ನು ಏತಕ್ಕಾಗಿ ಹೊಡೆದೆ? ನನ್ನನ್ನು ಬೇಟೆಯ ಧರ್ಮದಂತೆ ಹೊಡೆದೆನೆನ್ನಲೂ ಸಾಧ್ಯವಿಲ್ಲ. ನನ್ನ ಚರ್ಮ, ರೋಮ, ಎಲುವು ಮಾಂಸಗಳೊಂದೂ ನಿನಗೆ ಉಪಯೋಗವಿಲ್ಲ. ಇಂತಹ ನೀನು ರಾಜನಾಗುವುದರಿಂದ ದೇಶಕ್ಕೆ ಕ್ಷೇಮವಾಗಲಾರದು; ನಿನ್ನಂತಹ ಕುಟಿಲನೂ ಪಾಪಿಯೂ ದಶರಥಮಹಾರಾಜನ ಮಗನಾಗಿ ಹೇಗೆ ಹುಟ್ಟಿದನೋ? ಯಾರಾದರೂ ನಿನ್ನನ್ನು ಹೀಗೇಕೆ ಮಾಡಿದೆಯೆಂದು ಕೇಳಿದರೆ ಏನು ಉತ್ತರ ಹೇಳುವೆ? ನಿನಗಿರುವ ಪರಾಕ್ರಮವನ್ನು ಅನ್ಯಾಯವಾಗಿ ನನ್ನ ಮೇಲೆ ತೋರಿಸುವ ಬದಲಿಗೆ, ನಿನಗೆ ಕೇಡು ಬಗೆದ ರಾವಣನ ಮೇಲೆ ತೋರಿಸಬಾರದಿತ್ತೆ? ನೀನು ನನ್ನ ಎದುರಿನಲ್ಲಿ ನಿಂತು ಯುದ್ಧ ಮಾಡಿರುತ್ತಿದ್ದರೆ ಇಷ್ಟು

ಹೊತ್ತಿಗೆ ನಿನ್ನ ಜನ್ಮ ಮುಗಿದು ಹೋಗುತಿತ್ತು. ನನ್ನನ್ನು ಕೇಳಿದ್ದರೆ ಒಂದೇದಿನದೊಳಗೆ ಸೀತೆಯನ್ನು ಹುಡುಕಿ ನಿನಗೆ ತಂದು ಕೊಡುತ್ತಿದ್ದೆ. ಸುಗ್ರೀವನು ನನ್ನನ್ನು ಕೊಲ್ಲಿಸಿ ವಾನರರಾಜನಾಗ ಬಯಸುವುದು ಸಹಜ, ಯಾವ ಸಂಬಂಧವೂ ಇಲ್ಲದೆ ನೀನು ನನ್ನನ್ನು ಮರೆಯಲ್ಲಿದ್ದು ಹೊಡೆದುದು ಅನ್ಯಾಯ."

ಹೀಗೆ ಹೇಳಿ ಕ್ರಮವಾಗಿ ಎಚ್ಚರ ಕಳೆದುಕೊಳ್ಳುತ್ತಿದ್ದ ವಾಲಿಗೆ, ರಾಮನು ಈ ರೀತಿಯಾಗಿ ಸಮಾಧಾನ ಹೇಳತೊಡಗಿದನು: "ವಾಲಿಯೇ, ಗರ್ವಿಷ್ಠನಾದ ನಿನಗೆ ಧರ್ಮ ಸೂಕ್ಷ್ಮಗಳು ತಿಳಿಯದುದರಿಂದ ನನ್ನನ್ನು ನಿಂದನೆ ಮಾಡುತ್ತಿರುವೆ. ಈ ಭೂಪ್ರಪಂಚಕ್ಕೆಲ್ಲಾ ಇಕ್ಷ್ವಾಕು ವಂಶದವರು ಚಕ್ರವರ್ತಿಗಳು. ಈಗ ಭರತನು ರಾಜ್ಯವಾಳುತ್ತಿದ್ದಾನೆ. ಅವನ ಅಪ್ಪಣೆಯ ಮೇರೆಗೆ ನಾವು ಧರ್ಮವನ್ನು ಕಾಪಾಡುತ್ತ ಸಂಚರಿಸುತ್ತಿದ್ದೇವೆ. ನೀನು ಧರ್ಮ ಮಾರ್ಗದಿಂದ ತಪ್ಪಿದವನು. ಸ್ವಂತ ತಮ್ಮನ ಸತ್ಯಪ್ರವರ್ತನೆಯನ್ನು ಅರಿಯದವನು. ತಮ್ಮನ ಹೆಂಡತಿಯಾದ ರುಮೆಯನ್ನು ಎಳೆದುಕೊಂಡವನು. ಈ ಬಗೆಯ ಅಪರಾಧಗಳಿಗೆ ಇದುವೇ ನಿನಗೆ ತಕ್ಕ ಶಿಕ್ಷೆ. ಇದು ಮಾತ್ರವಲ್ಲದೆ ಸುಗ್ರೀವನು ನನಗೆ ಲಕ್ಷ್ಮಣನಿಗೆ ಸಮಾನನು. ಅವನ ಸ್ನೇಹಕ್ಕಾಗಿಯೂ ನಾನು ಈ ಕೆಲಸ ಮಾಡಿದೆ. ನಿನ್ನನ್ನು ಮರೆಯಲ್ಲಿದ್ದು ಕೊಂದುದಕ್ಕಾಗಿ ನಾನೇನೂ ಚಿಂತಿಸುವುದಿಲ್ಲ. ನನ್ನ ಮುಂದೆ ನೀನು ಯುದ್ಧ ಮಾಡಲಾರೆ; ಅದಕ್ಕೆ ನಿನಗೆ ಕಾರಣವಿಲ್ಲ. ಯುದ್ಧ ಮಾಡುತ್ತಾ ನೀನು ವೀರನಂತೆ ಸಾಯುವ ಅವಕಾಶವನ್ನಿತ್ತು ನಿನ್ನನ್ನು ಹೊಡೆದಿದ್ದೇನೆ. ಇದು ಅಧರ್ಮವಲ್ಲ. ವನಮೃಗಗಳನ್ನು ಹೊಡೆಯುವವರು ಮರೆಯಾಗಿದ್ದು, ಬಲೆ ಹಾಕಿ ಇನ್ನೂ ಅನೇಕ ಮಾಯೋಪಾಯಗಳನ್ನು ಅವಲಂಭಿಸುತ್ತಾರೆ, ತಿನ್ನುವ ಪ್ರಾಣಿಗಳನ್ನು ಮಾತ್ರವಲ್ಲದೆ ತಿನ್ನಲಾಗದ ಪ್ರಾಣಿಗಳನ್ನು ಕೂಡಾ ರಾಜರ್ಷಿಗಳು ಕೊಲ್ಲುತ್ತಾರೆ."



ರಾಮನ ಮಾತುಗಳು ಕಿವಿಗೆ ಬಿದ್ದಂತೆ ವಾಲಿ ಕಣ್ಣು ಮುಚ್ಚಿ ಬಿಡಿಸುತ್ತಾ, "ನಾನು ಸಾಯುವುದಕ್ಕಾಗಿ ಚಿಂತಿಸುವುದಿಲ್ಲ. ರಾಮಾ, ತಾರೆಯನ್ನು ಕುರಿತೂ, ಬಂಧುಗಳನ್ನು ಕುರಿತೂ ನನಗೇನೂ ಚಿಂತೆಯಿಲ್ಲ. ನನಗೆ ಅಂಗದನನ್ನು ಕುರಿತೇ ಚಿಂತೆಯಾಗಿದೆ. ಅವನಿಗೆ ನಾನೆಂದರೆ ಪ್ರಾಣ. ನನ್ನ ವಿಯೋಗದಿಂದ ಅವನು ತುಂಬಾ ದುಃಖಿಸುತ್ತಾನೆ. ಅವನು ದುಃಖಿಸುತ್ತಿದ್ದರೆ ನನ್ನ ಆತ್ಮಕ್ಕೆ ಶಾಂತಿಯಿಲ್ಲ. ಅವನನ್ನು ನೀನೇ ಕಾಪಾಡಬೇಕು. ನೀನು ಸುಗ್ರೀವನನ್ನು ನೋಡುವಂತೆಯೇ ಅಂಗದನನ್ನೂ ನೋಡಬೇಕು. ನಿನ್ನನ್ನೇ ನಂಬಿದ್ದೇನೆ" ಎಂದು ಹೇಳಿ ಸ್ಪೃಹೆ ತಪ್ಪಿದನು.

ರಾಮನು ಹಾಗೆಯೇ ಮಾಡುವೆನೆಂದು ವಾಲಿಗೆ ಮಾತು ಕೊಟ್ಟನು. ವಾಲಿ ಮತ್ತೇನೂ ಮಾತಾಡಲಿಲ್ಲ. ಕಣ್ಣು ತೆರೆಯಲೂ ಇಲ್ಲ.

ಅಷ್ಟರೊಳಗೆ ಈ ಸಂಗತಿ ತಾರೆಗೆ ತಿಳಿಯಿತು. ಅವಳು ಅಪಾರವಾದ ದುಃಖದಿಂದ ಮಗನನ್ನೂ

ಹಿಂದಿಟ್ಟುಕೊಂಡು ಅಳುತ್ತ ಕಿಷ್ಕಿಂಧೆಯಿಂದ ಬರ
ತೊಡಗಿದಳು. ದಾರಿಯಲ್ಲಿ ಅವಳಿಗೆ ಕೆಲವು ಮಂದಿ
ವಾನರರು ಇದಿರಾಗಿ, "ಹಿಂದಿರುಗಿ ಹೋಗು ತಾರಾ.
ಮೊದಲು ನಿನ್ನ ಮಗನಾದ ಅಂಗದನನ್ನು ಕಾಪಾ
ಡಿಕೋ. ಅವನನ್ನು ಅಡಗಿಸಿಡು. ಘೋರವಾದ
ಮೃತ್ಯು ರಾಮನ ರೂಪದಲ್ಲಿ ಬಂದು ವಾಲಿಯನ್ನು
ಎತ್ತಿಕೊಂಡು ಹೋಗುತ್ತಿದೆ. ನಗರದ ದ್ವಾರಗಳನ್ನು
ಭದ್ರವಾಗಿ ಮುಚ್ಚಿಸಿ, ಈ ಕೂಡಲೇ ಅಂಗದನಿಗೆ
ಪಟ್ಟಾಭಿಷೇಕ ಮಾಡು. ಇಲ್ಲದಿದ್ದರೆ ನಿಮಗೆ ಕಿಷ್ಕಿಂಧೆ
ಯಲ್ಲಿ ನಿಲ್ಲಲು ಜಾಗ ಸಿಗಲಾರದು. ಶತ್ರುಗಳಾದ
ಸುಗ್ರೀವನ ಕಡೆಯ ವಾನರರು ಬಂದು ಎಲ್ಲವನ್ನೂ
ಆಕ್ರಮಿಸಿಕೊಳ್ಳುತ್ತಾರೆ" ಎಂದರು.

ಭೀತಾವಹವಾದ ಅವರ ಮಾತುಗಳನ್ನು ತಾರೆ
ಲಕ್ಷ್ಯಮಾಡದೆ, "ನನ್ನ ಗಂಡನೇ ಹೋದಮೇಲೆ
ಮಗನೂ, ರಾಜ್ಯವೂ, ನನ್ನ ಶರೀರವೂ ಏನಾದ
ರೇನು ? ವಾಲಿ ಹೋದ ಕಡೆಗೇ ನಾನೂ ಹೋಗು
ತ್ತೇನೆ" ಎಂದು ಅಪಾರ ದುಃಖದಿಂದ ಅಳುತ್ತಾ,
ವೇಗವಾಗಿ ವಾಲಿ ಬಿದ್ದಲ್ಲಿಗೆ ಬಂದುಬಿಟ್ಟಳು. ಅಲ್ಲಿಯೇ
ನಿಂತಿದ್ದ ರಾಮಲಕ್ಷ್ಮಣರನ್ನು ಒಮ್ಮೆ ಮಾತ್ರ ನೋಡಿ
ಅವಳು ವಾಲಿಯ ಬಳಿಯಲ್ಲಿ ಕುಳಿತು ಅವನನ್ನು
ಆಲಿಂಗಿಸಿಕೊಂಡು ರೋದಿಸತೊಡಗಿದಳು. ತಾರೆ
ಯನ್ನೂ ಅಂಗದನನ್ನೂ ನೋಡಿದ ಕೂಡಲೇ ಸುಗ್ರೀ
ವನಿಗೆ ಕೂಡಾ ದುಃಖವು ಉಕ್ಕಿ ಬಂದಿತು
ಆಗ ಹನುಮಂತನು ತಾರೆಗೆ ಈ ವಿಧವಾಗಿ ಸಮ
ಧಾನ ಹೇಳತೊಡಗಿದನು: "ಅಮ್ಮಾ! ಎಲ್ಲ
ಮುಗಿಸಿ ಹೊರಟುಹೋಗುವ ವಾಲಿಯನ್ನು ಕುರಿತ
ಇನ್ನು ರೋದಿಸಿ ಪ್ರಯೋಜನವೇನಿಲ್ಲ. ಯಾವುದೋ
ಒಂದುದಿನ ಎಲ್ಲರೂ ಅವನ ಹಾಗೆ ಹೋಗಬೇಕಾ
ವರೇ. ಈಗ ನಿನ್ನನ್ನು ಕುರಿತು ನಾವೆಲ್ಲಾ ವಿಚಾ
ಮಾಡಬೇಕಾಗಿದೆ. ನಿನಗೆ ಮಗನಿದ್ದಾನೆ. ಅವ
ಯೋಗ ಕ್ಷೇಮಗಳನ್ನು ನೋಡಿ ಸರಿಯಾಗಿ ನಡೆದ
ಕೊಳ್ಳುವಂತೆ ತಿದ್ದಬೇಕು. ವೀರನಂತೆ ಹೋರಾ
ರಾಮಬಾಣದಿಂದ ಹೊರಟುಹೋದ ವಾಲಿ ಮಹಾತ
ನಾಗಿರುವನು. ಅವನಿಗೆ ಉತ್ತಮ ಲೋಕಗಳ
ದೊರಕುತ್ತವೆ. ಇನ್ನು ಮೇಲೆ ಅಂಗದನು ರಾ
ನಾಗಿರುವಾಗ, ನೀನು ಅವನಿಗೆ ದಾರಿ ತೋರಿಸುವ
ಳಾಗಿ ಸಹಾಯಕಳಾಗಿ ಇರಬೇಕು. ವಾಲಿಗೆ ಮಾ
ಬೇಕಾದ ಉತ್ತರ ಕ್ರಿಯೆಗಳನ್ನು ನೆರವೇರಿಸಿ, ಅಂಗ
ನಿಗೆ ಪಟ್ಟಾಭಿಷೇಕ ಮಾಡಬೇಕು"

ಈ ಮಾತುಗಳನ್ನು ಕೇಳಿ ತಾರೆ, "ಹನುಮಂತ
ನೀನು ಹೇಳಿದ ಕೆಲಸಗಳನ್ನು ಮಾಡಬೇಕಾದವ
ನಾನಲ್ಲ; ಸುಗ್ರೀವನು ಮಾಡಬೇಕಾದುವು. ನಾ
ವಾಲಿಯೊಂದಿಗೆ ಹೊರಟು ಹೋಗುವವಳು. ನನ
ಬೇರೆ ಯಾವ ಕೋರಿಕೆಯೂ ಇಲ್ಲ" ಎಂದಳು.

